ಕಾಯಕವೇ ಕೈಲಾಸ

# ಸಿದ್ಧಗಂಗಾ

ಸಂಪುಟ : ೫೧ ಡಿಸೆಂಬರ್ ೨೦೧೫ ಸಂಚಿಕೆ : ೧೨







ತುಮಕೂರು ಟೌನ್‌ಹಾಲ್‌ನಲ್ಲಿ ನಡೆದ ಜಿಲ್ಲಾ ವಾಹನ ಚಾಲಕರ ಸಂಘದ ಉದ್ಘಾಟನೆ ಹಾಗೂ ಕನ್ನಡ ರಾಜ್ಯೋತ್ಸವದ ಆಚರಣೆಯನ್ನು ಪರಮಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ನೆರವೇರಿಸಿದರು. ಈ ಸಂದರ್ಭದಲ್ಲಿ ಜಿಲ್ಲಾ ವಾಹನ ಚಾಲಕರ ಸಂಘದ ಪದಾಧಿಕಾರಿಗಳು ಉಪಸ್ಥಿತರಿದ್ದರು.



ಪರಮಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮೀಜಿಯವರ ಆಶೀರ್ವಾದ ಪಡೆದ ಕರ್ನಾಟಕ ಸರ್ಕಾರದ ಮಾನ್ಯ ಗೃಹ ಸಚಿವರಾದ ಡಾ. ಜಿ. ಪರಮೇಶ್ವರ್ ದಂಪತಿಗಳು.



ತುಮಕೂರಿನ ಎಂ.ಜಿ. ರಸ್ತೆಯಲ್ಲಿ ಎಸ್.ವಿ.ಸಿ. ಬ್ಯಾಂಕ್‌ನ ನೂತನ ಶಾಖೆಯನ್ನು ಪರಮಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ಉದ್ಘಾಟಿಸಿದರು. ಬ್ಯಾಂಕಿನ ವೈಸ್ ಛೇರ್ಮನ್ ಉದಯ್‌ಕುಮಾರ್ ಗುರುಕಾರ್, ಪ್ರಧಾನ ವ್ಯವಸ್ಥಾಪಕ ನಂದಕಿಶೋರ್ ಬಲ್ಲಾಳ್ ಮತ್ತಿತರರು ಉಪಸ್ಥಿತರಿದ್ದರು.






॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥

**ಆವಾವ ಕಾಯಕವ ಮಾಡಿದರು ಬಸವೇಶ**
**ಆವಗಂ ಶರಣರನು ಸೇವಿಪೆನು ಬಸವೇಶ**

# ಸಿದ್ಧಗಂಗಾ


**ಸಂಪುಟ : ೫೧ ಡಿಸೆಂಬರ್ ೨೦೧೫ ಸಂಚಿಕೆ : ೧೨**


## ಒಳಪುಟಗಳಲ್ಲಿ .................




ಸಂಪಾದಕರು :
**ಹೆಚ್.ವಿ. ವೀರಭದ್ರಯ್ಯ**

ಸಹ ಸಂಪಾದಕರು :
**ಎಚ್.ಎಸ್. ಸಿದ್ಧಗಂಗಪ್ಪ**

ಸಂಚಾಲಕರು :
**ಎಂ. ರೇಣುಕಾರಾಧ್ಯ**

ಪ್ರಕಾಶಕರು:
**ಹೆಚ್.ಬಿ. ಗಂಗಾಧರಯ್ಯ**

ವಿತರಣೆ :
**ಆರ್.ಎಸ್. ಮಲ್ಲೇಶಪ್ಪ**

**ಹಳೆಯ ವಿದ್ಯಾರ್ಥಿಗಳ ಸಂಘ**
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -೫೭೨ ೧೦೪.

ವಿಳಾಸ :
**'ಸಂಪಾದಕರು'**
**'ಸಿದ್ಧಗಂಗಾ' ಮಾಸಪತ್ರಿಕೆ**
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -೫೭೨ ೧೦೪

ಮುದ್ರಕರು
**ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಆಫ್‌ಸೆಟ್ ಮುದ್ರಣಾಲಯ,**
ಶ್ರೀ ಸಿದ್ಧಗಂಗಾ ಮಠ,
ತುಮಕೂರು - ೫೭೨ ೧೦೪.


ಲೇಖಕರ ಅಭಿಪ್ರಾಯಗಳು
ಪತ್ರಿಕೆಯ ಅಭಿಪ್ರಾಯಗಳಲ್ಲ


**ಚಂದಾ ವಿವರ : ವಾರ್ಷಿಕ ಚಂದಾ ರೂ. ೨೦೦/-**
**ಆಜೀವ ಸದಸ್ಯತ್ವ ರೂ. ೧೫೦೦/- ಬಿಡಿ ಪ್ರತಿ ರೂ. ೧೨.೦೦**

# ಅಭಿನಂದನೆ



ನವೆಂಬರ್ 14ರಂದು ಲಂಡನ್ ನಗರದಲ್ಲಿ ಬಸವಣ್ಣನವರ ಪುತ್ಥಳಿಯನ್ನು ಅನಾವರಣಗೊಳಿಸಿದ ಭಾರತದ ಪ್ರಧಾನಮಂತ್ರಿಗಳಾದ ಶ್ರೀ ನರೇಂದ್ರ ಮೋದಿಯವರು ಇದಕ್ಕೆ ಕಾರಣರು ಡಾ॥ ನೀರಜ್ ಪಾಟೀಲರು, ಚಿತ್ರದುರ್ಗದ ಶ್ರೀ ಮುರುಘಾಮಠದ ಪವಿತ್ರಾವರಣದಲ್ಲಿ 325 ಅಡಿಗಳೆತ್ತರ ಬೃಹತ್ ಕಂಚಿನ ಬಸವಣ್ಣನವರ ಮೂರ್ತಿ ಸ್ಥಾಪನೆ ಮಾಡುವ ಮಹಾಮಣಿಹಮುಖಿಯಾಗಿರುವ ಪೂಜ್ಯ ಶ್ರೀಗಳವರು. ತಿಪಟೂರಿನ ಗುರುಕುಲಾನಂದಾಶ್ರಮದಲ್ಲಿ ಬಸವಣ್ಣನವರ ಪುತ್ಥಳಿಯನ್ನು ಅನಾವರಣ ಮಾಡಿದ ಪೂಜ್ಯ ಶ್ರೀಗಳವರು ಬಸವ ತತ್ತ್ವಾಭಿಮಾನಿಗಳ ಮತ್ತು ಸಮಾಜ ಸುಧಾರಕರೆಲ್ಲರ ಅಭಿನಂದನೆಗೆ ಪಾತ್ರರಾಗಿದ್ದಾರೆ.

'ಬಸವಣ್ಣನವರಲ್ಲಿ ಜನಕಮಹಾರಾಜನ ವೈರಾಗ್ಯವನ್ನು ಶ್ರೀರಾಮನ ನ್ಯಾಯನಿಷ್ಠೆಯನ್ನು, ಸಾಕ್ರಟೀಸನ ಸತ್ಯಪ್ರೇಮವನ್ನು ಗೌತಮಬುದ್ಧನ ದಯಾಗುಣವನ್ನು, ಶ್ರೀ ವರ್ಧಮಾನಸ್ವಾಮಿಯ ಅಹಿಂಸಾಪ್ರೇಮವನ್ನು, ಏಸುಕ್ರಿಸ್ತನ ದೀನ ವಾತ್ಸಲ್ಯವನ್ನು, ಶ್ರೀಕೃಷ್ಣ ಅನಾಸಕ್ತಿಯೋಗವನ್ನು, ಶ್ರೀ ಶಂಕರಾಚಾರ್ಯರ ಆತ್ಮಜ್ಞಾನ ಸಂಪನ್ನತೆಯನ್ನು, ಕರ್ಣ, ದಧೀಚಿ, ಶಿಬಿಗಳ ದಾನಗುಣವನ್ನು ನಾವು ಕಾಣಬಹುದು' ಎನ್ನುವ ವ್ಯಾಕರಣತೀರ್ಥ ಚಂದ್ರಶೇಖರಶಾಸ್ತ್ರಿ ಹಿರೇಮಠರ ಮಾತುಗಳು ಬಸವಣ್ಣನವರ ವ್ಯಕ್ತಿತ್ವಕ್ಕೆ ಮುಡಿಸಿದ ಭಕ್ತಿಪುಷ್ಪಗಳಾಗಿವೆ.

ದೀನರನ್ನು ದಲಿತರನ್ನು 'ಇವನಮ್ಮವ ಇವನಮ್ಮವ ಇವನಮ್ಮವ' ನೆಂದು ಎದೆಗಪ್ಪಿಕೊಂಡ ಬಸವಣ್ಣನವರು ವಿಶ್ವ ವಿಭೂತಿಗಳು, ಅವರನ್ನು ಯಾವ ರೂಪದಲ್ಲಿ ಗೌರವಿಸಿದರೂ ಅಭಿನಂದನೀಯವೇ ಆಗಿದೆ.

ಚಿತ್ರದುರ್ಗದಲ್ಲಿ ಸ್ಥಾಪಿತವಾಗುತ್ತಿರುವ ಬೃಹತ್ ಪ್ರತಿಮಾ ಕೈಂಕರ್ಯದಲ್ಲಿ ಬಸವತತ್ತ್ವಾಭಿಮಾನಿಗಳೆಲ್ಲರೂ ಉದಾರವಾಗಿ ಧನಸಹಾಯ ದಾಸೋಹದಲ್ಲಿ ಭಾಗಿಗಳಾಗಬೇಕೆಂದು 'ಸಿದ್ಧಗಂಗಾ' ಪ್ರಾರ್ಥಿಸುತ್ತದೆ.

ಈ ಸಂದರ್ಭದಲ್ಲಿ ಕರ್ನಾಟಕ ಸರ್ಕಾರ ಹತ್ತು ಕೋಟಿ ರೂಪಾಯಿಗಳ ಧನಸಹಾಯ ಮಾಡಲು ಮುಂದೆ ಬಂದಿರುವುದಕ್ಕಾಗಿ ಅಭಿನಂದನೆಗಳನ್ನು 'ಸಿದ್ಧಗಂಗಾ' ಸಲ್ಲಿಸುತ್ತದೆ. ವಿಶೇಷವಾಗಿ ಮಾನ್ಯ ಮುಖ್ಯಮಂತ್ರಿಗಳಾದ ಶ್ರೀ ಸಿದ್ಧರಾಮಯ್ಯನವರಿಗೆ ಗೌರವಾಭಿನಂದನೆಗಳನ್ನು ಅರ್ಪಿಸುತ್ತದೆ.

* * *

**ಆತ್ಮೀಯರೇ,**

**'ಸಿದ್ಧಗಂಗಾ' 51** ವರ್ಷಗಳನ್ನು ದಾಟುತ್ತಿರುವ ಈ ಶುಭ ಸಂದರ್ಭದಲ್ಲಿ ಸಹಕರಿಸಿದ ಶ್ರೀಮಠದ ಆಡಳಿತ ವರ್ಗದವರನ್ನು, ಆಜೀವ ಸದಸ್ಯರನ್ನು, ಹಳೆಯ ವಿದ್ಯಾರ್ಥಿಗಳು ಹಾಗೂ ಹಿತೈಷಿಗಳ ಸಂಘದ ಸದಸ್ಯರನ್ನು, ಸಾಮಾನ್ಯ ಸದಸ್ಯರನ್ನು, ಜಾಹಿರಾತುದಾರರನ್ನು, ಲೇಖಕರನ್ನು, ಮುದ್ರಣಾಲಯದವರನ್ನು, ಪ್ರಕಾಶಕರನ್ನು, ಸಂಪಾದಕ ಮಂಡಲಿಯ ಪರವಾಗಿ ಹೃತ್ಪೂರ್ವಕವಾಗಿ ಕೃತಜ್ಞತೆಗಳನ್ನು ಸಮರ್ಪಿಸುತ್ತದೆ.

ಪತ್ರಿಕೆಯ ಪ್ರಾಣಜೀವಾಳವಾಗಿ ಆಶೀರ್ವದಿಸುತ್ತ ಮುನ್ನಡೆಸುತ್ತಿರುವ ಪದ್ಮಭೂಷಣ, ಕರ್ನಾಟಕರತ್ನ, ಬಸವಶ್ರೀ ಪುರಸ್ಕೃತ, ತ್ರಿವಿಧ ದಾಸೋಹಜ್ಯೋತಿ, 108 ವರ್ಷಗಳನ್ನು ದಾಟುತ್ತಿರುವ **ಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳವರನ್ನು** ಮತ್ತು ಶ್ರೀಮಠದ ಅಧ್ಯಕ್ಷರಾಗಿರುವ ಕಾಯಕಸಿರಿ ಪುಣ್ಯಮೂರ್ತಿ **ಪೂಜ್ಯ ಶ್ರೀ ಸಿದ್ಧಲಿಂಗಮಹಾಸ್ವಾಮಿಗಳವರನ್ನು** ಭಕ್ತಿಪೂರ್ವಕವಾಗಿ ಪ್ರಣಾಮಗಳನ್ನು ಸಮರ್ಪಿಸುತ್ತದೆ.

**- ಸಂಪಾದಕ**





# ಶ್ರಮಜೀವನ

ಇಂದು ರಾಷ್ಟ್ರ ಜೀವನ ಭ್ರಷ್ಟಗೊಂಡಿದೆ. ಎಲ್ಲೆಲ್ಲೂ ಎಲ್ಲ ಹಂತದಲ್ಲೂ ನೈತಿಕ ದಿವಾಳಿ ನಡೆದಿದೆ. ಸೋಮಾರಿತನ ಜನಜೀವನದಲ್ಲಿ ಹಾಸುಹೊಕ್ಕಾಗಿದೆ. ಜನತೆ ತಮ್ಮ ಶಕ್ತಿಯ ಸದುಪಯೋಗ ಮಾಡಿಕೊಳ್ಳುವ ಪ್ರಯತ್ನವನ್ನೇ ಮಾಡುತ್ತಿಲ್ಲ. ಶ್ರಮ ಯಾರಿಗೂ ಬೇಕಾಗಿಲ್ಲ. ಸುಖ ಎಲ್ಲರಿಗೂ ಬೇಕಾಗಿದೆ. ದುಡಿದು ತಿನ್ನಬೇಕೆಂಬ ದೃಷ್ಟಿನಿಷ್ಠೆಯಿಲ್ಲ. ಸದಾ ಅನಾಯಾಸವಾಗಿ ಸಂಪತ್ತನ್ನು ದೋಚಿಕೊಳ್ಳುವ, ಬಾಚಿಕೊಳ್ಳುವ ಮಾರ್ಗವನ್ನೇ ಹುಡುಕಿಕೊಳ್ಳುವ ಹೀನ ಜೀವನ ದೃಷ್ಟಿ ಬೆಳೆದು ನಿಂತಿದೆ. ಮುಖಂಡರು ಆದರ್ಶ ಪರಂಪರೆಯ ವಾರಸುದಾರರಾಗುತ್ತಿಲ್ಲ. ಸ್ವಾರ್ಥದ ಸಂತೆಯಲ್ಲಿ ಬಾಚಿಕೊಂಡದ್ದೇ ತನ್ನದು ಎಂಬ ದೃಷ್ಟಿಯವರಾಗುತ್ತಿದ್ದಾರೆ. ದೇಶವನ್ನು ಋಣಭಾರದಿಂದ ತತ್ತರಿಸುವಂತೆ ಮಾಡಿದ್ದಾರೆ. ಅನ್ಯರಾಷ್ಟ್ರಗಳಿಂದ ತಂದಿರುವ ಸಾಲಕ್ಕೆ ಬಡ್ಡಿ ಕಟ್ಟುವ ಶಕ್ತಿಯೂ ಇಲ್ಲದಂತೆ ಮಾಡಿರು ವುದೊಂದೆ ಅರವತ್ತು ವರ್ಷಗಳ ಸಾಧನೆಯಾಗಿದೆ. ಸಾವಿರ ಸಾವಿರ ಕೋಟಿ ರೂಗಳ ಬಡ್ಡಿಯನ್ನು ತೆರಬೇಕಾದ ದುಸ್ಥಿತಿಗೆ ದೇಶವನ್ನು ತಂದು ನಿಲ್ಲಿಸಿದ್ದಾರೆ. ಶ್ರಮವೊಂದೇ, ಕಾಯಕ ಸದ್ಭಾವನೆಯೊಂದೇ ದೇಶ ಕಟ್ಟುವ ಮಣಿಹವೆಂಬುದನ್ನು ಮರೆತಿದ್ದಾರೆ. ದುಡಿದು ತಿನ್ನುವುದು ಪ್ರಸಾದವಾಗುತ್ತದೆ ; ಪದಾರ್ಥವೆನಿಸುವುದಿಲ್ಲ ದುಡಿಯದೆ, ಮೈಗಳ್ಳತನದಿಂದ, ಸೋಮಾರಿಗಳಾಗಿ ಊಟಮಾಡುವುದು ಕೂಳಾಗುತ್ತದೆ ; ಪ್ರಸಾದವಾಗುವುದಿಲ್ಲ. ಇಂದು ಎತ್ತೆತ್ತ ನೋಡಿದರೂ ಕೂಳುಬಾಕರೇ ವಿಜೃಂಭಿಸಿದ್ದಾರೆ. ಪ್ರಸಾದ ಜೀವಿಗಳು ವಿರಳವಾಗುತ್ತಿದ್ದಾರೆ. ಕಾಯಕ ಮಾಡದೆ ತಿನ್ನುವುದು ಕೂಳು; ಶ್ರಮಜೀವನ ನಡೆಸಿ ಊಟ ಮಾಡುವುದು ಪ್ರಸಾದ.

(ಬೆನ್ನುಡಿ– ನಿರಂಜನಶ್ರೀ – ಶ್ರೀಗಳವರ 104ನೇ ಹುಟ್ಟುಹಬ್ಬದ ಸಂಪುಟ–2011)

# ಶ್ರೀ ಸಿದ್ಧಲಿಂಗೇಶ್ವರ ವಚನ



***ಪಶುವಿನ ಉದರದೊಳಗಿಪ್ಪ ಕ್ಷೀರ ಶಿಶುವಿಂಗಲ್ಲದೆ ಇಪ್ಪ ಪರಿಯೇನೊ ಪಶುವಿನ ಕಳೇವರ ಪೊರಮಟ್ಟು ಕಾಲಾಗ್ನಿಯಾಗಿ ಪಶುವ ಕೊಂದಿತ್ತು, ಶಿಶುವ ನುಂಗಿತ್ತು ಪಶುಪತಿಯ ಕೂಡಿ ಶಿಶುವಿಂಗೆ ಪಶುವಿಂಗೆ ಹೊರಗಾದ ವಿಷಯಾತೀತನು ನಿಮ್ಮ ಅರುಹು ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ.***

ಪಶುವಿನ ಜೀವನ, ಉದರದೊಳಗೆ ಅಂತರಂಗದಲ್ಲಿ ಇಪ್ಪ-ಇರುವ ಕ್ಷೀರ-ಪರಮಾಮೃತ ಜ್ಞಾನವು, ಶಿಶುವಿಂಗಲ್ಲದೆ-ಮನೋಪ್ರಪಂಚಕ್ಕಲ್ಲದೆ, ಇಪ್ಪ-ಇರುವ, ಪರಿಯಿದೇನೋ-ಇದರ ನಿಲುಕಡೆಯೇನೋ, ಪಶುವಿನ-ಜೀವನ, ಕಳೇವರದಿಂ-ದೇಹದಂತರಂಗದಿಂದೆ, ಪೊರ ಮಟ್ಟು-ಹೊರ ಹೊರಲು ಕಾಲಾಗ್ನಿಯಾಗಿ-ಪ್ರಳಯ ಕಾಲಾಗ್ನಿಯಾಗಿ, ಪಶುವ ಕೊಂದಿತ್ತು ಶಿಶುವ ನುಂಗಿತ್ತು, ಪಶುವ-ಜೀವನೆಂಬ ಪಶುವನು ಕೊಂದಿತ್ತು-ನಷ್ಟವ ಮಾಡಿತ್ತು, ಶಿಶುವ-ಮನೋಪ್ರಪಂಚನು, ನುಂಗಿತ್ತು-ಅನುಗ್ರಹಿಸಿತ್ತು, ಪಶುಪತಿಯ ಕೂಡಿ-ಬ್ರಹ್ಮಾದಿ ಪಶುಗಳಿಗೆ ಕರ್ತೃವಾದ ಕರಶಿವಲಿಂಗದ ಬೆರೆದು ಶಿಶುವಿಂಗೆ-ಮನೋ ಪ್ರಪಂಚಕ್ಕೆ ಹೊರಗಾದ-ವಿಲಕ್ಷಣವಾದ, ವಿಷಯಾತೀತನು-ವಿಷಯಪ್ರಪಂಚಿಗೆ ಮೀರಿ ತೋರಲ್ಪಟ್ಟಾತನು, ನಿಮ್ಮ ಅರುಹು -ನಿಮ್ಮ ಜ್ಞಾನವು, ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೆ.

(ಕೃಪೆ: ತೋಂಟದಾರ್ಯ ವಚನ ವ್ಯಾಖ್ಯೆ- ಸಂಪಾದಕರು- ಡಾ॥ ಸಾ.ಶಿ. ಮರುಳಯ್ಯ, ಪ್ರಕಾಶಕರು, ಶ್ರೀ ತೋಂಟದ ಸಿದ್ಧಲಿಂಗೇಶ್ವರ ಕೈಂಕರ್ಯ (ದಾಸೋಹ) ಸೇವಾ ಸಂಘ(ರಿ.) ಎಡೆಯೂರು- ಕುಣಿಗಲ್ ತಾಲ್ಲೂಕು)

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ವಿನಯದನುಭಾವದ ವಿರತಿಯ ಗಿರಿಶೃಂಗ
ಅನುನಯದ ಅರಿವಿನ ಸಿರಿತುಂಗ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕರದಲ್ಲಿ ಕುರುಹಿಟ್ಟೆ ಶಿರದಲ್ಲಿ ಕರವಿಟ್ಟೆ
ಉರದಲ್ಲಿ ಅರಿವಿಟ್ಟು ಸಲಹಿದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಾನಾವರ್ಣದ ಮನವ ಏನ ಮಾಡುವೆನಯ್ಯಾ
ನೀನಾದರೂ ಹಸಗೊಳಿಸಿ ಸಲಹಯ್ಯ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನೆರೆನಂಬು ನೆರೆನಂಬು ಕರಸ್ಥಲದ ಕುರುಹನು
ಗುರು ನಿನಗೆ ಅದು ತಾನೆ ಅರಿಯೆಂದ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು

ಕರುಣಿವರ ಶ್ರೀಗುರುವೆ ಕಾಲ ಹರಶ್ರೀಗುರುವೆ
ಕರ್ಮಹರ ಶ್ರೀಗುರುವೆ ನಿರ್ಮಳವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಿನ್ನೊಳಗ ತಿಳಿಯಲು ಜಗಸೋಜಿಗ ಪಡುತಿದೆ
ನಿನ್ನೊಳಗೆ ಲೋಕವೆನಿತಿಹವು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕಾಲಜ್ಞಾನಿ ಗುರುವೆ ಕರ್ಮ ವಿದೂರನೆ
ನಿತ್ಯಸಂತೃಪ್ತ ಶಿವಸತ್ಯ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಿಮ್ಮಿಂದ ಬದುಕಿದೆನು ನಿಮ್ಮಿಂದ ಬಾಳಿದೆನು
ನಿಮ್ಮಿಂದ ನಿಜವನರಿತೆನು । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಲೋಗರ ಜೊತೆಗಿರುವೆ ಲೋಗನಾಗದಿರುವೆ
ಲೋಗರ ಲೋಭಕೆ ನಗುತಿರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಿಮ್ಮ ಸಿರಿಪಾದುಕೆಗೆ ಏನು ಸಮಬಹುದಯ್ಯ
ನಿಮ್ಮ ನುಡಿಲಿಂಗಕೆ ಸಮವೇನು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

– ಹೆಚ್.ವಿ. ವೀರಭದ್ರಯ್ಯ







# ಜಗದೊಡೆಯ

– ಶ್ರೀ ಸಿದ್ಧೇಶ್ವರ ಸ್ವಾಮಿಗಳು *

ನಮ್ಮ ಎದುರಿನಲ್ಲಿರುವ ವಸ್ತು ಸಮೂಹವೇ ಭವ್ಯ ಜಗತ್ತು. ಬೆಳಕಿನ ಕಿರಣದ ವೇಗ ಸೆಕೆಂಡಿಗೆ ಮೂರು ಲಕ್ಷ ಕಿ.ಮೀ. ಆ ಕಿರಣ ವೇಗದ ಕುದುರೆಯನ್ನೇರಿ ಲಕ್ಷ ವರುಷ ಸುತ್ತಿದರೂ ಈ ಜಗತ್ತಿನ ದಂಡೆ ದೊರೆಯದು. ಅಷ್ಟು ವಿಶಾಲ ಈ ಜಗತ್ತು. ಆದರೂ ಅದು ಸ್ಥಿರವಲ್ಲ. ಸಚಲ, ಪರಿಣಾಮಶೀಲ, ನಾಶವಂತ ಎನ್ನುವ ಶಬ್ದ ಅದನ್ನೇ ಸೂಚಿಸುತ್ತದೆ. ನಾವು ಈ ಶಬ್ದದ ಸ್ವರೂಪವನ್ನು ಅರಿತರೆ ಜಗತ್ತನ್ನು ಅರಿತಂತೆಯೇ.

ಶಬ್ದಗಳಲ್ಲಿ ಸಾಂಕೇತಿಕ ಮತ್ತು ಲಾಕ್ಷಣಿಕ ಎಂದು ಎರಡು ಪ್ರಕಾರ. ವಸ್ತುವಿನ ಗುಣಸ್ವರೂಪ ತಿಳಿಸಲಾರದೆ ಕೇವಲ ರೂಢಿಯಿಂದ ಬಳಸಲ್ಪಡುವ ಶಬ್ದವು ಸಾಂಕೇತಿಕ., ಉದಾ: ಹೂವು, ಎಲೆ, ಕಾಯಿ ಇತ್ಯಾದಿ. ಹೂವು ಎಂದಾಗ ಹೂವಿನ ಗುಣಸ್ವರೂಪವೇನು ಗೊತ್ತಾಗುವುದಿಲ್ಲ. ಅದು ಸಾಂಕೇತಿಕ ಶಬ್ದ. ವಸ್ತುವಿನ ಗುಣಸ್ವರೂಪವನ್ನು ತಿಳಿಸಿ ಕೊಡುವ ಅರ್ಥಪೂರ್ಣ ಶಬ್ದವು ಲಾಕ್ಷಣಿಕ. ಉದಾ- 'ಕುಂಭಕಾರ' ಎಂಬ ಶಬ್ದವು ಗಡಿಗೆಯನ್ನು ಮಾಡುವವನು ಎಂಬ ಸ್ಪಷ್ಟ ಅರ್ಥ ಕೊಡುತ್ತದೆ ಅದು ಲಾಕ್ಷಣಿಕ. ಹಾಗೆಯೇ 'ಜಗತ್ತು' ಎನ್ನುವುದೂ ಒಂದು ಲಾಕ್ಷಣಿಕ ಶಬ್ದ. 'ಜಗತ್ಯಾಂ ಜಗತಿ ಇತಿ ಯತ್ಕಿಂಚಿತ್ ಜಗತ್' ಈ ಜಗತ್ತಿನಲ್ಲಿ ಇರುವುದೆಲ್ಲವೂ 'ಜಗತಿ' ಎಂದರೆ ಚಲಿಸುತ್ತದೆ. ಆದ್ದರಿಂದ ಇದು ಜಗತ್ತು! ಈ ಸಚಲ ಜಗತ್ತಿನಲ್ಲಿ ಎಲ್ಲ ವಸ್ತುಗಳೂ ನಿತ್ಯವೂ ಹೊಸ ಹೊಸ ರೂಪು ಪಡೆಯುತ್ತವೆ. ಹೊಸ ಹೊಸ ಘಟನೆಗಳಿಗೆ ಅವಕಾಶ ಮಾಡಿಕೊಡುತ್ತದೆ. ಈ ಅರ್ಥದಲ್ಲಿ ಜಗತ್ತು ಎಂದರೆ ಅಸಂಖ್ಯ ಘಟನೆಗಳ ನಿರಂತರ ಪ್ರವಾಹ.

ಇದೊಂದು ಮಂಚ. ಮೇಲ್ನೋಟಕ್ಕೆ ಇದು ಸ್ಥಿರ. ಒಳಹೊಕ್ಕು ನೋಡಿದರೆ ಅಸ್ಥಿರ. ಇದರಲ್ಲಿ ಅಸಂಖ್ಯ ಅಣುಗಳಿವೆ. ಅವು ಪ್ರಚಂಡ ವೇಗದಿಂದ ಸುತ್ತುತ್ತಲಿವೆ. ಹಾಗೆಯೇ ನಮ್ಮ ದೇಹವೂ ಅಸ್ಥಿರ. ಅದು ಹೊರ ನೋಟಕ್ಕೆ ಸ್ಥಿರ, ಅಚಲ. ಒಳಗೆ ಹೃದಯ, ಪುಪ್ಪುಸ ಧಮನಿಗಳು ರಕ್ತದ ಕಣ ಕಣ ಎಲ್ಲವೂ ಕ್ರಿಯಾಶೀಲ. ಅದೇ ಜೀವಂತಿಕೆಯ ಲಕ್ಷಣ. ಈ ಆಂತರಿಕ ಕ್ರಿಯೆಯಿಂದಾಗಿಯೇ ದೇಹದಲ್ಲಿ ಬಾಲ್ಯ, ತಾರುಣ್ಯ, ವೃದ್ಧಾಪ್ಯಗಳು ಉಂಟಾಗುತ್ತವೆ. ಈ ಕ್ರಿಯೆ, ಚಲನೆ ನಿಂತರೆ ಜೀವವೆಲ್ಲಿ? ದೇಹವೆಲ್ಲಿ?

ಉರಿಯುತ್ತಿರುವ ದೀಪವು ಸ್ಥಿರವಾಗಿರುವಂತೆಯೇ ಕಾಣುತ್ತದೆ. ಆದರೆ ಅದು ಎಣ್ಣೆ-ಬತ್ತಿಗಳಿಂದಾದ ಅಸಂಖ್ಯ ಕಿಡಿಗಳ ನಿರಂತರ ಪ್ರವಾಹ. ಎಣ್ಣೆ ತೀರುತ್ತಲೇ, ಬತ್ತಿ ಸವೆಯುತ್ತಲೇ ದೀಪ ಆರುತ್ತದೆ. 'ಸಂಸಾರ ಎಂಬುವುದೊಂದು ಗಾಳಿಯ ಸೊಡರು' ಎಂದರು ಬಸವಣ್ಣನವರು. ಮಾನವ ಜೀವನವು ಒಂದು ಗಾಳಿಗಿಟ್ಟ ದೀಪ. ಆಯುಷ್ಯದ ಎಣ್ಣೆ ತೀರಿದಾಗ, ಪುಣ್ಯದ ಬತ್ತಿ ಸವೆದಾಗ, ಕಾಲದ ಗಾಳಿ ಬೀಸಿದಾಗ, ಈ ಜೀವದೀಪಗಳು ಆರಿಬಿಡುತ್ತದೆ. ಕಾರ್ಗತ್ತಲೆ ಕವಿಯುತ್ತದೆ. ಹೀಗೆ ಎಷ್ಟೋ ಜೀವದೀಪಗಳು ದಿನವೂ ಆರಿ ಹೋಗುವುದನ್ನು ನೋಡುತ್ತೇವೆ. ಆದರೆ ನಾವು ಮಾತ್ರ ಸ್ಥಿರವಾಗಿ ಇರುವಂತೆ ಭಾವಿಸುತ್ತೇವೆ, ಭ್ರಮಿಸುತ್ತೇವೆ.

ಒಬ್ಬ ವ್ಯಕ್ತಿಯ ಮಿತ್ರನು ದೇಹ ಬಿಟ್ಟ. ಅವನ ಶವ ಸಂಸ್ಕಾರಕ್ಕೆ ಈತನೂ ಸ್ಮಶಾನಕ್ಕೆ ಹೋಗಿದ್ದ. ಅಲ್ಲಿ ತನ್ನ ಮಿತ್ರನ ದೇಹವು ಅಗ್ನಿಗೆ ಆಹುತಿಯಾಗುವುದನ್ನು ಕಣ್ಣಾರೆ ಕಂಡ. ಜೀವನವು ಎಷ್ಟು ಅಸ್ಥಿರ, ನಶ್ವರ ಎನಿಸಿತು. 'ಮನುಷ್ಯನು ಈ ನಶ್ವರ ಜೀವನಕ್ಕಾಗಿ, ಸಂಸಾರಕ್ಕಾಗಿ ಹೆಚ್ಚು ಆಶೆ ಪಡೆಬಾರದು, ಹೋರಾಡಬಾರದು!' ಎಂದು ಅಲ್ಲಿರುವವರಿಗೆ ಈತ ಹೇಳಿದ. ಜನರು ಈತನ ಉಪದೇಶಕ್ಕೆ ಮೌನವಾಗಿ ಸಮ್ಮತಿಸಿ ಮನೆಗೆ ಹೊರಟರು. ಅಷ್ಟರಲ್ಲಿ ಯಾರೋ ಈತನ ಕಾಲಮೇಲೆ ಕಾಲಿಟ್ಟದ್ದರಿಂದ ಇವನ ಹಳೆ ಚಪ್ಪಲಿ ಹರಿಯಿತು. 'ಕಣ್ಣು ಕಾಣುವುದಿಲ್ಲವೆ? ಹೇಗೆ ನಡೆಯುತ್ತೀರಿ?' ಎಂದು ಅವರೊಂದಿಗೆ ಈತ ವಾದ ವಿವಾದಕ್ಕೆ ಇಳಿದು ಹೋರಾಡತೊಡಗಿದ. ಅಲ್ಲಿದ ಜನರೆಲ್ಲ ಈತನಿಗೆ ಸಮಾಧಾನ ಹೇಳಿ ಆಗಬಹುದಾಗಿದ್ದ ಮತ್ತೊಂದು ಅನಾಹುತ ತಪ್ಪಿಸಿದರು. ಒಂದು ಕ್ಷಣದ ಹಿಂದೆಯೇ 'ಮಾನವ ಜೀವನ ಅಸ್ಥಿರ-

* ಜ್ಞಾನಯೋಗಾಶ್ರಮ, ಬಿಜಾಪುರ ಜಿಲ್ಲೆ.

ನಶ್ವರ' ಎಂದು ಹೇಳಿದವನೇ ತನ್ನ ಹಳೆಯ ಚಪ್ಪಲಿಗಳಿಗಾಗಿ ಹೋರಾಡಿದ! ಇದೇ ಮಾಯೆ, ಮೋಹ!

ಅಸ್ಥಿರವೂ ನಶ್ವರವೂ ಆದ ಈ ಜಗತ್ತಿನಲ್ಲಿಯೇ ಸ್ಥಿರವೂ, ಶಾಶ್ವತವೂ ಆದ ಪರಮಸತ್ಯವೊಂದಿದೆ. ಅದನ್ನು ಗುರುತಿಸಿದಾಗ ಈ ನಶ್ವರ ಪ್ರಪಂಚದ ಮೋಹ ಅಳಿಯುತ್ತದೆ. ಅಜ್ಞಾನ ಅಹಂಕಾರದ ಕತ್ತಲೆಯು ಕಳೆಯುತ್ತದೆ, ಕರಗುತ್ತದೆ. ನಿಜ ಜ್ಞಾನದ–ನಿರಹಂಕಾರದ ನಿಜಬೆಳಕು ಸೂಸಿ ಬರುತ್ತದೆ. ಆಗ ನಮ್ಮ ಬದುಕು ಪ್ರಸನ್ನ, ಪರಿಪೂರ್ಣ, ಅದು ಜೀವನಯೋಗ!

ಈ ಜಗತ್ತಿನಲ್ಲಿ ಪ್ರತಿಯೊಂದು ವಸ್ತುವೂ ತನ್ನ ಅಸ್ತಿತ್ವಕ್ಕಾಗಿ ಇನ್ನೊಂದು ವಸ್ತುವನ್ನು ಅವಲಂಬಿಸಿದೆ. ಇಲ್ಲೊಂದು ಹೂವಿದೆ. ಈ ಹೂವಿಗೆ ಆಶ್ರಯ ಬಳ್ಳಿ. ಬಳ್ಳಿಗೆ ಆಶ್ರಯ ಭೂಮಿ. ಭೂಮಿಗೆ ಆಶ್ರಯ ಬಯಲು. ಆ ಬಯಲಿಗೆ ಇನ್ನೇನು ಆಶ್ರಯ? ಹೀಗೆ ಕೊನೆಯಲ್ಲಿ ಯಾವುದು ಎಲ್ಲದಕ್ಕೂ ಆಶ್ರಯವಾಗಿ ತನಗೆ ಮಾತ್ರ ಬೇರೆ ಆಶ್ರಯವಿಲ್ಲದೆ ಇರುತ್ತದೆಯೋ ಅದುವೇ ಪರಮಾಶ್ರಯ, ಪರಮಸತ್ಯ!

ಜಗತ್ತಿನ ಕುರಿತು ಈಗಿನ ವಿಜ್ಞಾನಿಗಳ ಸಾಮಾನ್ಯ ಅಭಿಪ್ರಾಯ ಹೀಗಿದೆ–'ನೆಲ–ಜಲ, ಬೆಳಕು–ಗಾಳಿ ಮುಂತಾದವುಗಳಿಂದ ಕೂಡಿದ ಈ ಜಗತ್ತು ಒಂದು ದಿನ ಎಲ್ಲಿಯೋ ಮರೆಯಾಗಿ ಬಿಡುತ್ತದೆ. ಅದೇ ಈ ಜಗತ್ತಿನ ಪರಮಾಶ್ರಯ! ಅದು ಎಲ್ಲವನ್ನೂ ತನ್ನಲ್ಲಿ ಮರೆಮಾಡಿಕೊಂಡು ಎಲ್ಲದಕ್ಕೂ ಆಶ್ರಯ ಕೊಡುತ್ತದೆ. ಆದ್ದರಿಂದ ಅದು ಪರಮಾಶ್ರಯ, ಪರಮಸತ್ಯ.

ಇದೇ ಮಾತನ್ನು ನಮ್ಮ ಋಷಿಗಳು 'ಯತೋ ಇಮಾನಿ ಭೂತಾನಿ ಜಾಯಂತೇ, ಯೇನ ಜಾತಾನಿ ಜೀವಂತಿ, ಯತ್ ಪ್ರಯಂತಿ, ಅಭಿವಿಶಂತಿ ತದ್ ಬ್ರಹ್ಮ! 'ಈ ಜಗತ್ತು ಯಾವುದರಿಂದ ಜನಿಸಿತೋ, ಯಾವುದರಲ್ಲಿ ಜೀವಿಸುತ್ತದೆಯೋ, ಕೊನೆಗೆ ಯಾವುದರಲ್ಲಿ ಹೋಗಿ ಮರೆಯಾಗುತ್ತದೆಯೋ ಅದುವೇ ಬ್ರಹ್ಮ!' ಎಂದರು. ಆ ಬ್ರಹ್ಮವೇ ನಮಗೆಲ್ಲ ಪರಮಾಶ್ರಯ. ಈ ಜಗದೊಡೆಯ!

ನಾವು ನಮ್ಮ ಮನೆ–ಮಠ, ಆಸ್ತಿ–ಪಾಸ್ತಿಗಳಿಗೆ, ತಾತ್ಕಾಲಿಕ ಒಡೆಯರು. ನಮ್ಮನ್ನು ಸಾಕಿ ಸಲಹಿದ ಪಂಚ ಮಹಾಭೂತಗಳಿಂದಾದ ಈ ಜಗತ್ತು ನಮಗೆ ಒಡೆಯ. ಕೊನೆಗೆ ನಮ್ಮನ್ನೂ ಈ ಜಗತ್ತನ್ನೂ ರಕ್ಷಿಸುವ ಆ ಪರಮಾತ್ಮನೇ ಜಗದೊಡೆಯ, ನಿಜವಾದ ಒಡೆಯ! ಈ ಸತ್ಯ ಸಂಗತಿಯನರಿಯದೆ ಮನುಷ್ಯ ತಾನೇ ಎಲ್ಲದಕ್ಕೂ ಒಡೆಯನೆಂದು ಭಾವಿಸಿ ಭ್ರಮಿಸಿ ಭವ–ಬಂಧನಕ್ಕೆ ಒಳಗಾಗುತ್ತಾನೆ!

ಶ್ರೀರಾಮನು ತಾನು ಸೀತೆಯ ಒಡೆಯನೆಂದು ಭಾವಿಸಿದ. ಒಮ್ಮೆ ರಾವಣನಿಂದಾಗಿ ಸೀತೆಯ ಮೇಲಿನ ಒಡೆತನ ಕಳೆದುಕೊಂಡ. ಮತ್ತೊಮ್ಮೆ ತಾನೇ ಸೀತೆಯನ್ನು ಅಡವಿಗೆ ಕಳುಹಿ ಅವಳ ಮೇಲಿನ ಒಡೆತನ ಕಳೆದುಕೊಂಡ ಮನಸಾ ನಿರಾಕರಿಸಿದ. ಅವತಾರಿ ಪುರುಷ ಶ್ರೀರಾಮನಿಗೆ ಹೀಗಾದರೆ, ಯಾರಿಗೆ ಯಾರು ಒಡೆಯರು ಈ ಜಗದಲ್ಲಿ? ಲೂಯಿಯು ತಾನು ಫ್ರಾನ್ಸ್ ದೇಶದ ಒಡೆಯನೆಂದು ಭಾವಿಸಿದ. ಮುಂದೆ ಅದೇ ದೇಶದಲ್ಲಿ ಕ್ರಾಂತಿ ನಡೆದಾಗ ಅದೇ ಲೂಯಿ ರಕ್ತದ ಮಡುವಿನಲ್ಲಿ ಮುಳುಗಿ ಮಡಿದು ಹೋದ! ಎಲ್ಲ ದೇಶಗಳ ರಾಜ–ಮಹಾರಾಜರ ಕಥೆ ಹೆಚ್ಚು ಕಡಿಮೆ ಇಷ್ಟೇ ಅಲ್ಲವೇ?

ತಂದೆಯು ತನ್ನ ಮಕ್ಕಳಿಗೆ ಒಡೆಯನೆಂದು ಭಾವಿಸುತ್ತಾನೆ. ಮಕ್ಕಳು ಚಿಕ್ಕವರಿದ್ದಾಗ, ತಂದೆ–ತಾಯಿಗಳು ಹೇಳಿದಂತೆ ಕೇಳಿಕೊಂಡೇ ಇರುತ್ತಾರೆ. ಮುಂದೆ ಅದೇ ಮಕ್ಕಳು ಬೆಳೆದು ದೊಡ್ಡವರಾಗುತ್ತಾರೆ. ಬೇರೆ ಹೊಸಬರ ಮಾತುಗಳನ್ನು ಒಲವಿನಿಂದ ಆಸಕ್ತಿಯಿಂದ ಕೇಳತೊಡಗುತ್ತಾರೆ. ಅವರಿಗೀಗ ಹಳಬರ, ಹಿರಿಯರ ಮಾತುಗಳು ಅಷ್ಟಾಗಿ ರುಚಿಸುವುದಿಲ್ಲ. ಇದನ್ನು ನೋಡಿದ ತಂದೆತಾಯಿಗಳು ಮನದಲ್ಲೇ ಮರುಗುತ್ತಾರೆ. ಆದರೆ ಮೊದಲು ತಾವೂ ತಮ್ಮ ತಂದೆ–ತಾಯಿಗಳಿಗೆ ಹೀಗೆಯೇ ಮಾಡಿದ್ದರೆನ್ನುವುದನ್ನು ಅವರು ಮರೆಯುತ್ತಾರೆ. ಈ ವಿಷಯದಲ್ಲಿ ವಿದೇಶೀಯರು ಜಾಣರೆನ್ನಬಹುದು. ಅವರು ತಮ್ಮ ದೇಶದ ಕೌಟುಂಬಿಕ ಜೀವನದಲ್ಲಿ ಯಾರಿಗೂ ಯಾರೂ ಒಡೆಯರೆಂದು ಭಾವಿಸುವುದಿಲ್ಲ. ಸ್ನೇಹಿತರಂತೆ, ಸಹಜವಾಗಿ ಸ್ವಾತಂತ್ರ್ಯದೊಂದಿಗೆ ಬಾಳುತ್ತಾರೆ.

ಈ ದೇಶದಲ್ಲಿ 'ನೆಹರುವಿನ ನಂತರ ಯಾರು?' ಎಂದು ಪ್ರಶ್ನಿಸುತ್ತಿದ್ದರು. ಆದರೆ ಅವರ ಮನೆಯೊಳಗಿನವರೇ ಬಂದು ಈ ದೇಶವನ್ನಾಳಿದರು. 'ಅವರೇ ಭಾರತ; ಭಾರತವೇ ಅವರು!' ಎಂದು ಜನ ನಂಬಿದರು. ಮುಂದೆ ಅವರೂ ಹೋದರು. ಈಗ ಯಾರೋ ಬಂದಿರುವರು. ಇವರಾದ ಮೇಲೆ ಮತ್ತೆ ಯಾರೋ ಬರುತ್ತಾರೆ. ಯಾರೇ ಬಂದರೂ ಹೋದರೂ





ಈ ದೇಶ, ಈ ಜಗತ್ತು ನಿಲ್ಲುವುದಿಲ್ಲ. ನಿರಂತರ ನಡೆದೇ ಇರುತ್ತದೆ. ಕಾರಣ ನಾವು ಯಾರೂ ಈ ಜಗತ್ತಿನ ಒಡೆಯರಲ್ಲ! ಪರಮಾತ್ಮನೊಬ್ಬನೇ ಈ ಜಗತ್ತಿನ ನಿಜವಾದ ಒಡೆಯ!

ಒಬ್ಬ ಮಹಾರಾಜನಿಗೆ ಮಕ್ಕಳೇ ಇರಲಿಲ್ಲ. ಹತ್ತಾರು ವರುಷಗಳ ನಂತರ ಒಂದು ಗಂಡು ಮಗುವಾಯಿತು. ರಾಜಕುಮಾರನು ಜನಿಸಿದನೆಂದು ಎಲ್ಲರಿಗೂ ಹರ್ಷವಾಯಿತು. ನಾಲ್ಕಾರು ವರುಷ ಮಗು ಎಲ್ಲರ ಕಣ್ಣಗೊಂಬೆಯಾಗಿ ಬೆಳೆಯಿತು. ನಂತರ ಯಾವುದೋ ಕಾಯಿಲೆಯಿಂದ ರಾಜನ ಮಗ ತೀರಿಹೋದ. ಎಲ್ಲರೂ ದುಃಖದ ಮಡುವಿನಲ್ಲಿ ಮುಳುಗಿದರು. ರಾಜ ರಾಣಿಯರು ಮಗುವಿನ ಮೃತ ದೇಹದ ಎದುರು ಕುಳಿತು ಅಪಾರವಾಗಿ ದುಃಖಿಸ ತೊಡಗಿದರು.

ಆಕಸ್ಮಿಕವಾಗಿ ಆ ರಾಜ್ಯಕ್ಕೆ ಓರ್ವ ತಪಸ್ವಿಗಳು ಆಗಮಿಸಿದಾಗ 'ನಮ್ಮ ಮಗುವನ್ನು ಬದುಕಿಸಿ ಕೊಡಬೇಕು' ಎಂದು ಆ ದಂಪತಿಗಳು ಪ್ರಾರ್ಥಿಸಿದರು. ತಪಸ್ವಿಗಳು– 'ಅದು ಹೇಗೆ ಸಾಧ್ಯ?' ಎಂದರು. 'ತಾವು ತಪಸ್ವಿಗಳು, ತಮ್ಮಿಂದ ಇದು ಖಂಡಿತಾ ಸಾಧ್ಯ'–ಎಂದು ಅವರು ಅನನ್ಯವಾಗಿ ಪ್ರಾರ್ಥಿಸಿದರು. ಆಗ ತಪಸ್ವಿಗಳು ಮಗುವಿನ ಆತ್ಮವನ್ನು ಆಹ್ವಾನಿಸಿ ರಾಜದಂಪತಿಗಳಿಗೆ ಮಾತನಾಡಲು ಹೇಳಿದರು. 'ಮಗು, ನೀನು ಈ ದೇಹದಲ್ಲಿ ಪ್ರವೇಶಿಸು, ನಾವು ನಿನ್ನನ್ನು ಅಪಾರವಾಗಿ ಪ್ರೀತಿಸುತ್ತೇವೆ!' ಎಂದರು ತಾಯಿತಂದೆ. 'ಈ ದೇಹದಲ್ಲಿ ಇರುವವರೆಗೆ ನೀವು ನನಗೆ ಅನ್ನಪಾನವಿತ್ತು ಬೆಳೆಸಿದಿರಿ. ನನಗೆ ಒಡೆಯರಾದಿರಿ. ತಾಯಿ ತಂದೆ ಎನಿಸಿದಿರಿ. ಈಗ ನನಗೆ ಯಾರೂ ಒಡೆಯರಲ್ಲ. ಏಕೆಂದರೆ ನಾನೀಗ ಪರಮಾತ್ಮನ ಆಶ್ರಯದಲ್ಲಿರುವೆ. ಅವನೇ ನನಗೂ–ನಿಮಗೂ ಎಲ್ಲರಿಗೂ ಒಡೆಯ. ಜಗದೊಡೆಯ, ನಿಜವಾದೊಡೆಯ! ದಯವಿಟ್ಟು ನೀವು ನನ್ನನ್ನು ಮರೆತು ಬಿಡಿ!' ಮಗುವಿನ ಆತ್ಮದ ನುಡಿಗಳನ್ನು ಕೇಳಿ ರಾಜದಂಪತಿಗಳಲ್ಲಿ ಅರಿವಿನ ಬೆಳಕು ಮೂಡಿತು, ದುಃಖ ಶಮನಿಸಿತು!

ಈ ಜಗದಲ್ಲಿ ಯಾರಿಗೆ ಯಾರೂ ಸ್ಥಿರ ಒಡೆಯರಲ್ಲ, ಮಹಾದೇವನೊಬ್ಬನೇ ಈ ಜಗದೊಡೆಯ, ನಿಜವಾದ ಒಡೆಯ. ಈ ಸತ್ಯದ ಅರಿವಿನಿಂದ ಪ್ರಪಂಚದ ತಾಪ ಅನುತಾಪಗಳೆಲ್ಲ ಮರೆ. ಸ್ಥಿರ, ಶಾಂತಿ–ಪ್ರಶಾಂತಿ! ಅದು ಜೀವನಯೋಗ!!

## 'ಸಿದ್ಧಗಂಗಾ' ಮಾಸಪತ್ರಿಕೆ ಆಜೀವ ಸದಸ್ಯರಲ್ಲಿ ಮನವಿ

ಶ್ರೀಮಠದ ಮುಖವಾಣಿ ಸಿದ್ಧಗಂಗಾ ಮಾಸಪತ್ರಿಕೆಗೆ ಆಜೀವ ಓದುಗರಾಗಿರುವುದು ಸಂತೋಷ. ಇದರಿಂದ 'ಸಿದ್ಧಗಂಗಾ' ನಿರಂತರವಾಗಿ ನಿಮ್ಮ ಮನ–ಮನೆ ಬೆಳಗುತ್ತಲಿದೆ. ತಮಗೆ ಮಠದ ಪರವಾಗಿ ಧನ್ಯವಾದಗಳು.

ಪತ್ರಿಕೆ ಮುನ್ನಡೆ ಅಸಾಧ್ಯವಾಗಿದೆ. ಪೇಪರ್, ಪ್ರಿಂಟಿಂಗ್, ಪೋಸ್ಟೇಜ್ ಇನ್ನಿತರೆ ಖರ್ಚು ವೆಚ್ಚಗಳು ದುಬಾರಿಯಾಗಿದೆ.

ಪ್ರಾರಂಭಕ್ಕೆ ೫೦೦/– ರೂ, ೧೦೦೦/–ರೂ ಆಜೀವ ಚಂದಾ ಸಂದಾಯ ಮಾಡಿದ್ದಿರಿ. ಇದರಿಂದ ಬ್ಯಾಂಕ್ ಠೇವಣಿಯಿಂದ ಬರುವ ಬಡ್ಡಿ ಕೇವಲ ೫೦/– ರೂ, ೧೦೦/– ಮಾತ್ರ. ಇಷ್ಟು ಕನಿಷ್ಠ ಹಣದಿಂದ ಪತ್ರಿಕೆ ಪ್ರಸಾರ ತೊಡಕಾಗಿ ನಷ್ಟವಾಗುತ್ತಿದೆ. ಪ್ರಯುಕ್ತ ಈ ಆರ್ಥಿಕ ಹಿಂಜರಿತ ದಯವಿಟ್ಟು ಅರ್ಥಮಾಡಿಕೊಳ್ಳಿ.

**ಪ್ರಸ್ತುತ ಆಜೀವ ಚಂದಾ ೨೦೧೪ ವರ್ಷದಿಂದ ೧೫೦೦/– ರೂ ನಿಗದಿ ಮಾಡಿದೆ. ಈ ಮೊತ್ತಕ್ಕೆ ಹೊಂದುವಂತೆ ಹಿಂದೆ ೫೦೦/– ರೂ ಸಂದಾಯ ಮಾಡಿರುವವರು ಬಾಕಿ ೧೦೦೦/– ರೂ ಸಂದಾಯ ಮಾಡಬೇಕು. ೧೦೦೦/– ರೂ ಸಂದಾಯ ಮಾಡಿರುವವರು ಬಾಕಿ ೫೦೦/– ಸಂದಾಯ ಮಾಡಬೇಕು.**

ನಿಮಗೆ ಅನ್ವಯಿಸುವ ಬಾಕಿ ಚಂದಾ ಮೊತ್ತ ಸಿದ್ಧಗಂಗಾ ಮಾಸಪತ್ರಿಕೆ ಹೆಸರಿನಲ್ಲಿ ನಗದು/ಚೆಕ್/ಡಿ.ಡಿ. ಮೂಲಕ ತಪ್ಪದೆ ಪತ್ರಿಕೆ ಆಜೀವ ಸದಸ್ಯತ್ವದ LM ನಂಬರ್ ಸೂಚಿಸಿ ದೂರವಾಣಿ/ಮೊಬೈಲ್ ನಂಬರ್ ನೊಂದಿಗೆ ಈ ವಿಳಾಸಕ್ಕೆ ಕಳುಹಿಸಬೇಕಾಗಿ ಕೋರುತ್ತೇವೆ.

'ಸಿದ್ಧಗಂಗಾ' ಮುನ್ನಡೆಗೆ ಬಾಕಿ ಸಂದಾಯ ಮಾಡಿ ಸಹಕರಿಸಬೇಕಾಗಿ ನಮ್ರ ವಿನಂತಿ.

ಪ್ರಕಾಶಕರು, 'ಸಿದ್ಧಗಂಗಾ' ಮಾಸಪತ್ರಿಕೆ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ –೫೭೨ ೧೦೪.
ದೂರವಾಣಿ : 0816–2282322

# ಬಸವೋತ್ತರ ಕಾಲದ ಶರಣ ಸಾಹಿತ್ಯ

– ಆರ್.ಎಸ್. ಚಾಪಗಾವಿ

**ಕಾ**ಲಕಾಲಕ್ಕೆ ರಾಜರು ಬದಲಾಗಬಹುದು, ರಾಜ್ಯಗಳೂ ಹಾಳಾಗಬಹುದು. ಆದರೆ ಜನಜೀವನದಲ್ಲಿ ಹಾಸು ಹೊಕ್ಕಾಗಿರುವ ಧರ್ಮ, ಸಂಸ್ಕೃತಿ ಮತ್ತು ಸಾಹಿತ್ಯ ಹಾಳಾಗಲಾರವು. ಅವು ಜನಮನದಲ್ಲಿ ಉಳಿದಿದ್ದರೆ ಶಾಶ್ವತವಾಗಿ ಮುಂದುವರೆಯುತ್ತ ಹೋಗುತ್ತವೆ. ಹನ್ನೆರಡನೆಯ ಶತಮಾನದಲ್ಲಿ ಬಸವಣ್ಣನವರ ನೇತೃತ್ವದಲ್ಲಿ ಶಿವಶರಣರ ಪ್ರಗತಿಪರ ವಿಚಾರಗಳು ಉದಯಗೊಂಡು ಜನಮನವನ್ನು ಆಕರ್ಷಿಸಿದವು. ಆಗ ವಚನ ಸಾಹಿತ್ಯ ಪ್ರಭೇದ ಹುಟ್ಟಿಕೊಂಡಿತು. ಅದು ಬಹುಬೇಗ ನಾಡಿನಾದ್ಯಂತ ಪಸರಿಸಿತು. ಬಸವಣ್ಣ, ಜೇಡರ ದಾಸಿಮಯ್ಯ, ಸಕಲೇಶ ಮಾದರಸ, ಅಲ್ಲಮಪ್ರಭು, ಅಕ್ಕಮಹಾದೇವಿ, ಚನ್ನಬಸವಣ್ಣ, ಸಿದ್ಧರಾಮ ಮೊದಲಾದವರ ವಚನಗಳು ಜನಮನದಲ್ಲಿ ಮಾರ್ದನಿಸಿದವು. ಕನ್ನಡ ಸಾಹಿತ್ಯ ಇತಿಹಾಸದಲ್ಲಿ ವಚನ ಸಾಹಿತ್ಯ ಅತ್ಯಂತ ಮೌಲಿಕವಾದುದೆಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ವಚನಗಳೊಂದಿಗೆ ಸ್ವರವಚನಗಳು, ಯೋಗಾಂಗ ತ್ರಿವಿಧಿ, ಸಕೀಲಗಳು, ಕರಣ ಹಸುಗೆ, ಮಂತ್ರಗೋಪ್ಯ ಮೊದಲಾದ ಸಾಹಿತ್ಯ ಕೃತಿಗಳು ಬಂದವು. ಅರಸು ಬಿಜ್ಜಳನ ಕೊಲೆಯ ನಂತರ ವಚನ ಸಾಹಿತ್ಯಕ್ಕೆ ಕುತ್ತು ಬಂದಿತು. ಬಿಜ್ಜಳನ ಕೊಲೆಗೆ ಶರಣರೇ ಕಾರಣವೆಂದು ಬಗೆದು ಶರಣರನ್ನೂ ವಚನಸಾಹಿತ್ಯವನ್ನೂ ನಾಶಮಾಡುವ ಕಾರ್ಯ ನಡೆಯಿತು ಆತ್ಮರಕ್ಷಣೆ ಹಾಗೂ ವಚನ ಸಾಹಿತ್ಯ ರಕ್ಷಣೆಗಾಗಿ ಶರಣರು ಕಲ್ಯಾಣ ತೊರೆದು ಹೋಗಿದ್ದು ಇತಿಹಾಸ. ಜನಮನ ಆಕರ್ಷಿಸಿದ್ದ ಈ ಸಾಹಿತ್ಯ ಕೆಲದಿನಗಳವರೆಗೆ ಭೂಗತವಾಗಿದ್ದು ಬಸವಯುಗದ ನಂತರವೂ ಮತ್ತೆ ತಲೆಯೆತ್ತಿ ಉಚ್ಛ್ರಾಯ ಸ್ಥಿತಿಗೆ ಬಂದಿತು. ಅದಕ್ಕೆ ಪೂರಕವಾಗಿ ವಿವಿಧ ಸಾಹಿತ್ಯ ಪ್ರಕಾರ ಹುಟ್ಟಿಕೊಂಡಿರುವುದನ್ನು ಕಾಣುತ್ತೇವೆ.

13ನೇ ಶತಮಾನದಲ್ಲಿ ದೇವಗಿರಿ ಯಾದವರೂ 14ನೇ ಶತಮಾನದಲ್ಲಿ ಮುಸಲ್ಮಾನರೂ ಕರ್ನಾಟಕವನ್ನು ಆಕ್ರಮಿಸಿದರು. ಆ ಕಾಲದಲ್ಲಿ ಸಾಹಿತ್ಯ ರಚನೆಗೆ ಯಾವುದೇ ಪ್ರೋತ್ಸಾಹ ಸಿಗದೆ ಹೋದರೂ 13ನೇ ಶತಮಾನದಲ್ಲಿದ್ದ ರಗಳೆ ಕವಿ ಹರಿಹರನು ರಗಳೆಗಳಲ್ಲಿ ಶಿವಶರಣರ ಚರಿತ್ರೆಗಳನ್ನು ಬರೆದನು. ಗದ್ಯ ಪದ್ಯಗಳೆರಡರಲ್ಲೂ ಸುಂದರ ಪದಪುಂಜಗಳ ಹೇರಳ ಬಳಕೆಯಿಂದ ಈ ಕೃತಿ ಶೋಭಿಸಿದೆ. ಹರಿಹರನ ಸೋದರ ಅಳಿಯನಾದ ರಾಘವಾಂಕನು ಷಟ್ಪದಿ ಕಾವ್ಯದಲ್ಲಿ ಸಿದ್ಧರಾಮಚರಿತೆ ಹಾಗೂ ಸೋಮನಾಥ ಚರಿತ್ರೆ (ಶರಣ ಅಧ್ಯಯನ ಕುರಿತು) ಕೃತಿಗಳನ್ನು ರಚಿಸಿದನು. ಕೆರೆಯ ಪದ್ಮರಸನು (1385) ರಗಳೆ ಸ್ವರೂಪದ ದೀಕ್ಷಾಬೋಧೆ ರಚಿಸಿದನು. ಇದರಲ್ಲಿ ದೀಕ್ಷೆ ಹಾಗೂ ಗುರು ಶಿಷ್ಯ ಸಂಬಂಧ ಕುರಿತ ವಿವರಣೆ ಇದೆ. 14ನೇ ಶತಮಾನದಲ್ಲಿ ಪಾಲ್ಕುರಿಕೆ ಸೋಮನಾಥನು ತೆಲುಗು ಭಾಷೆಯಲ್ಲಿ ಬಸವ ಪುರಾಣ ರಚಿಸಿದನು. ಇದನ್ನೇ ಭೀಮಕವಿಯು ಕನ್ನಡದಲ್ಲಿ ಬರೆದನು. ಈ ಕೃತಿ ಷಟ್ಪದಿಯಲ್ಲಿದೆ. 15ನೇ ಶತಮಾನವು ಶರಣಧರ್ಮ ಹಾಗೂ ಶರಣ ಸಾಹಿತ್ಯದ ಪುನರುಜ್ಜೀವನದ ಕಾಲವಾಗಿದೆ. ಈ ಶತಮಾನದಲ್ಲಿ ತೋಂಟದ ಸಿದ್ಧಲಿಂಗಯತಿಗಳು ನೂರೊಂದು ವಿರಕ್ತರೊಡನೆ ನಾಡೆಲ್ಲ ಸಂಚರಿಸಿ ಶರಣ ಧರ್ಮವನ್ನು ಪುನರುತ್ಥಾನಗೊಳಿಸಿದರು. ಸಿದ್ಧಲಿಂಗೇಶ್ವರರು ವಚನಗಳಲ್ಲಿ 'ಷಟ್‌ಸ್ಥಳ ಜ್ಞಾನ ಸಾರಾಮೃತ' ಕೃತಿ ರಚಿಸಿದರು. ಈ ಶತಮಾನದಲ್ಲಿ ಆಳಿದ ವಿಜಯನಗರ ಅರಸರು ಈ ಸಾಹಿತ್ಯಕ್ಕೆ ಪ್ರೋತ್ಸಾಹ ನೀಡಿದರು. ಪ್ರೌಢ ದೇವರಾಯನ ಆಸ್ಥಾನದಲ್ಲಿ ದಂಡಾಧೀಶನಾಗಿದ್ದ ಲಕ್ಕಣ್ಣ ದಂಡೇಶನು (1425) 'ಶಿವತತ್ವ ಚಿಂತಾಮಣಿ' ಗ್ರಂಥ ಬರೆದನು. ದಂಡಾದೀಶ ಜಕಣಾಚಾರ್ಯನು 'ಏಕೋತ್ತರ ಸಶತಸ್ಥಲ' ಕೃತಿ ರಚಿಸಿದನು. ಕುಮಾರ ಬಂಕನಾಥನು ಪ್ರಭುದೇವ ವಚನಗಳನ್ನು ಸಂಗ್ರಹಿಸಿ ಅವುಗಳಿಗೆ ಟೀಕೆ ಬರೆದನು. ಇದೇ ಕಾಲಕ್ಕೆ ಖಿಲವಾಗಿ ಹೋಗಿದ್ದ ವಚನಗಳನ್ನು ಪುನಃ ಸಂಗ್ರಹಿಸುವ ಕಾರ್ಯ ನಡೆಯಿತು. ಕಲ್ಲುಮಠ ಪ್ರಭುದೇವರಿಂದ 'ಲಿಂಗಾಲೀಲಾ ವಿಲಾಸ ಚಾರಿತ್ರ್ಯ' ರಚಿಸಲ್ಪಟ್ಟಿತು. ಇದರಲ್ಲಿ ವಚನಗಳ ಸಹಾಯದಿಂದ ಶಿವಶರಣರ ತತ್ವಗಳನ್ನು ನಿರೂಪಿಸಲಾಗಿದೆ. ಇದೇ ಸಮಯದಲ್ಲಿ ಚಾಮರಸ ಕವಿಯ ಪ್ರಸಿದ್ಧವಾದ 'ಪ್ರಭು ಲಿಂಗ ಲೀಲೆ' ಕೃತಿ ರಚಿಸಿದನು. ಇದು ಷಟ್ಪದಿಯಲ್ಲಿದೆ. ಈ ಕಾಲದಲ್ಲಿ ಮಗ್ಗೆಯ ಮಾಯಿದೇವನು(1430) ಷಟ್ಪದಿಯಲ್ಲಿ ಪ್ರಭುಗೀತೆ, ಏಕೋತ್ತರ ಶತಸ್ಥ, ಗದ್ಯದಲ್ಲಿ ವಚನಗಳನ್ನು ಬರೆದಿದ್ದಾನೆ. ಗುರುಬಸವ ಕವಿ (1430) ಪರಿವರ್ಧಿನಿ ಷಟ್ಪದಿಯಲ್ಲಿ 'ಶಿವಯೋಗಾಂಗ ಭೂಷಣ', ಚಂದ್ರಕವಿ (1430) ಚಂಪೂ ಕಾವ್ಯದಲ್ಲಿ 'ವಿರೂಪಾಕ್ಷಾಷ್ಠಾನ', ಗುಬ್ಬಿಯ ಮಲ್ಲಣ್ಣ (1475) ವಚನಗಳಲ್ಲಿ 'ಗಣ್ಯಭಾಷ್ಯ ರತ್ನಮಾಲೆ' ಸ್ವತಂತ್ರ ಸಿದ್ಧ ಲಿಂಗೇಶ್ವರರಿಂದ 'ಸಿದ್ಧಲಿಂಗೇಶನ ವಚನಗಳು' ಸಿಂಗಿರಾಜ (1500) ಅಮಲ ಬಸವ ಚಾರಿತ್ರ ಚತುರ್ಮುಖ ಬೊಮ್ಮರಸನು ವಾರ್ಧಕ ಷಟ್ಪದಿಯಲ್ಲಿ 'ರೇವಣ ಸಿದ್ದೇಶ್ವರ' ಪುರಾಣಗಳನ್ನು ರಚಿಸಿದನು.

## 16–17ನೇ ಶತಮಾನದ ಶರಣ ಸಾಹಿತ್ಯ :

16–17ನೇ ಶತಮಾನದ ಕಾಲದಲ್ಲಿ ವಾಙ್ಮಯಾತ್ಮಕ ಚಟುವಟಿಕೆಗಳು ಭರದಿಂದ ನಡೆದದ್ದು ಕಾಣುತ್ತದೆ. ಬಹಳ ಜನ ವೀರಶೈವ ರಾಜಮನೆತನದವರು ಕರ್ನಾಟಕದಲ್ಲಿ ಆಗಿ ಹೋದರು. ಅವರು ಸಾಹಿತ್ಯ ಸಂಸ್ಕೃತಿಗೆ ಪ್ರೋತ್ಸಾಹ ನೀಡಿದರು. 15ನೇ ಶತಮಾನದಲ್ಲಿ ಶರಣಧರ್ಮ ಜಾಗೃತಿ ಹೊಂದಿ ಮಠಗಳು ಸ್ಥಾಪನೆಯಾದವು. 16–17ನೇ ಶತಮಾನ ದಲ್ಲಿ ಇದು ಮುನ್ನಡೆಯಿತು. ಅಸಂಖ್ಯ ಮಠಗಳು ಸ್ಥಾಪನೆ ಗೊಂಡವು. ಈ ಕಾಲಕ್ಕೆ ಮಠಾಧಿಪತಿಗಳ ಯುಗವೆಂದು ಕರೆಯಬಹುದಾಗಿದೆ. ಈ ಮಠಗಳ ಆಶ್ರಯದಲ್ಲಿ ಶರಣ ಸಾಹಿತ್ಯವು ವಿಪುಲವಾಗಿ ಬಹುಮುಖವಾಗಿ ಬೆಳೆಯಿತು. ಹಲವು ಮಠಾಧೀಶರು ವಚನಗಳನ್ನು ಇತರ ಕೃತಿಗಳನ್ನು ಬರೆದರು. ಶಿವಶರಣರ ಮತ್ತು ಮಠಾಧಿಕಾರಿಗಳ ಚರಿತ್ರೆಗಳು ಪುರಾಣಗಳು ಸಾಕಷ್ಟು ಪ್ರಮಾಣದಲ್ಲಿ ರಚನೆಯಾದವು. ವಚನಗಳು, ತ್ರಿಪದಿಗಳು, ಷಟ್ಪದಿಗಳು, ಶತಕ ಸಾಂಗತ್ಯ ಅಷ್ಟಕ, ದಂಡಕ, ಕಂದ ನಾಂದ್ಯ ಹೀಗೆ ವೈವಿಧ್ಯಮಯ ಸಾಹಿತ್ಯ ಕೃತಿಗಳಿಂದ ಅಲಿಖಿತ ಜಾನಪದಗಳಿಂದ ಶರಣ ಸಾಹಿತ್ಯ ವಿಜೃಂಭಿಸಿತು. ಕನ್ನಡ ಸಾಹಿತ್ಯ ಶ್ರೀಮಂತವಾಯಿತು. ಶರಣ ಸಾಹಿತ್ಯದಲ್ಲಿ 12ನೇ ಶತಮಾನವನ್ನು ತಾತ್ವಿಕ ಯುಗವೆಂದೂ 15ನೇ ಶತಮಾನವನ್ನು ಪುನರುಜ್ಜೀವನ ಯುಗವೆಂದೂ 16–17ನೇ ಶತಮಾನಗಳನ್ನು ಮಠಾಧಿಪತಿಗಳ ಯುಗ ಅಥವಾ ಭಕ್ತಿಯುಗವೆಂದು ಕರೆದಿದ್ದಾರೆ. 16–17ನೇ ಶತಮಾನದಲ್ಲಿ ರಚಿತವಾದ ಸಾಹಿತ್ಯದ ಸಂಕ್ಷಿಪ್ತ ವಿವರಣೆ ಹೀಗಿದೆ.

**ಷಟ್ಪದಿ ಕಾವ್ಯ :** ಈ ಯುಗದಲ್ಲಿ ಷಟ್ಪದಿ ಕಾವ್ಯ ರಚನೆ ಬಹು ಸಂಖ್ಯಾತವಾಗಿ ಬೆಳೆಯಿತು. ಗುಬ್ಬಿಯ ಮಲ್ಲಣಾರ್ಯನ 'ವೀರ ಶೈವಾಮೃತ ಪುರಾಣ' ಹಾಗೂ 'ಭಾವಚಿಂತಾರತ್ನ', ಚನ್ನಬಸವಾಂಕನ 'ಮಹಾದೇವಿಯಕ್ಕನ ಪುರಾಣ' ಕುಮಾರ ಚನ್ನಬಸವನ 'ಸೋಸೆಲ ಭೈರವೇಂದ್ರನ ಚರಿತೆ', ಬಸವಾಂಕನ 'ಉದ್ಭಟದೇವ ಚರಿತ್ರೆ' ನಂಜುಂಡನ 'ಭೈರವೇಶ್ವರ ಕಾವ್ಯ', ವಿರೂಪಾಕ್ಷ ಪಂಡಿತನ 'ಚನ್ನಬಸವ ಪುರಾಣ', ವಿರಕ್ತ ತೋಂಟದಾರ್ಯನ 'ಸಿದ್ದೇಶ್ವರ ಪುರಾಣ', ಬಸಲಿಂಗನ 'ಶಿವಾಧಿಕ್ಯ ಪುರಾಣ', ಹರಿಶ್ವರನ 'ಪ್ರಭುದೇವರ ಪುರಾಣ', ಸಿದ್ಧನಂಜೇಶನ 'ರಾಘವಾಂಕ ಪುರಾಣ' ಬಸವಲಿಂಗ ಕವಿಯ 'ಬಸವೇಶ್ವರ ಪುರಾಣ', ಮಲ್ಲಿಕಾರ್ಜುನನ 'ಶಂಕರದಾಸಿಮಯ್ಯ ಪುರಾಣ, ಷಡಕ್ಷರ ದೇವನ 'ಬಸವರಾಜ ವಿಜಯ' ಮೊದಲಾದ ಮಹತ್ವದ ಕೃತಿಗಳ ರಚನೆಯಾಯಿತು. ಅಲ್ಲದೆ ನಿಜಗುಣ ಶಿವಯೋಗಿಗಳಿಂದ 'ಕೈವಲ್ಯ ಪದ್ಧತಿ' 'ವಿವೇಕ ಚಿಂತಾಮಣಿ' 'ಪರಮಾನುಭವ ಬೋಧೆ' ಮತ್ತು ಇತರ ಕೃತಿಗಳು ರಚನೆ ಯಾದವು. ಈ ಕೃತಿಗಳಲ್ಲಿ ಚರಿತ್ರೆಗಳೊಡನೆ ಸಿದ್ಧಾಂತದ ವಿಷಯಗಳೂ ನಿರೂಪಿಸಲ್ಪಟ್ಟು ಭಕ್ತಿ ಭಾವವನ್ನು ಬೆಳೆಸುವ ಉದ್ದೇಶವೂ ಕಂಡುಬರುತ್ತದೆ.

**ಸಾಂಗತ್ಯಗಳು :** ಇವು ಒಂದು ಬಗೆಯ ಪದ್ಯಗಳಾಗಿವೆ. ಇವುಗಳಲ್ಲಿ ತಾತ್ವಿಕ ವಿಷಯಗಳು ಶರಣರ ಚರಿತ್ರೆಗಳೂ ಬಂದಿವೆ. 'ಹರಿಶ್ಚಂದ್ರ ಮತ್ತು ಚೋಳರಾಜನ ಸಾಂಗತ್ಯ' 'ರೇಣುಕ ಸಾಂಗತ್ಯ' ಪ್ರಮುಖವಾಗಿವೆ.

**ತ್ರಿಪದಿಗಳು :** ಇವು ಜನಪ್ರಿಯ ಕವನಗಳಾಗಿವೆ. ನಿಜಗುಣ ಶಿವಯೋಗಿಯ ತ್ರಿಪದಿಗಳು, ಸರ್ವಜ್ಞನ ತ್ರಿಪದಿಗಳು, ಗುರುಲಿಂಗದೇವನ 'ಗುರು ಕರುಣ ತ್ರಿವಿಧಿ' 'ಶೀಲ ವಂತಯ್ಯನ ತ್ರಿವಿಧಿ, ಷಟ್ಸ್ಥಲ ತ್ರಿವಿಧಿ, ಇಷ್ಟಲಿಂಗ ತ್ರಿವಿಧಿ, ಮಿಶ್ರಸ್ತೋತ್ರ ತ್ರಿವಿಧಿ, ಸಿದ್ದೇಶ್ವರ ತ್ರಿವಿಧಿ ಮುಂತಾದ ಕೃತಿಗಳಿವೆ.

**ಶತಕಗಳು :** ಇವು ಸಾಮಾನ್ಯವಾಗಿ 108 ನುಡಿಗಳನ್ನು ಒಳಗೊಂಡಿವೆ. ಸೋಮೇಶ್ವರ ಶತಕ, ಅನುಭವ ಶತಕ, ಗುರು ಶಂಕರ ಶತಕ ಮುಂತಾದ ರಚನೆಗಳಿವೆ. ಅಲ್ಲಿ ನೀತಿ ಬೋಧಕ ವಿಷಯಗಳೇ ಪ್ರಧಾನವಾಗಿವೆ.

* ೬೪೪, ಬಸವ ಚೇತನ, ರಾಮತೀರ್ಥ ನಗರ, ಬೆಳಗಾವಿ -೧೬. ಮೊ: ೯೪೮೦೪೬೬೧೪೬.

**ನಾಂದ್ಯಗಳು** : ಇದು ಒಂದು ಬಗೆಯ ಸ್ತೋತ್ರ ಸಾಹಿತ್ಯವಾಗಿದೆ. ಮಲ್ಲೇಶ್ವರನ ನಾಂದ್ಯ, ಮುರುಗಾಸ್ವಾಮಿಗಳ ನಾಂದ್ಯ, ಚನ್ನಬಸವ ಪುರಾಣ ನಾಂದ್ಯ, ಪ್ರಭುದೇವ ಪುರಾಣ ನಾಂದ್ಯ, ಸಿದ್ಧೇಶ್ವರ ನಾಂದ್ಯ, ಸೌಂದರ್ಯ ಪುರಾಣ ನಾಂದ್ಯ ಅಲ್ಲದೆ ಲೋಕಪ್ರಿಯ ಗ್ರಂಥಗಳ ವಿಷಯ ವಾಗಿಯೂ ನಾಂದ್ಯಗಳಿವೆ.

**ಗದ್ಯಗಳು** : ಷಟ್‌ಸ್ಥಳ ವಿಷಯಗಳ ಮಹತ್ವವನ್ನು ವಿವರಿಸುವ ಕೃತಿಗಳಿವೆ. ಷಟ್‌ಸ್ಥಲ, ಗದ್ಯ, ಅಕ್ಷರಾಂಕನ ಗದ್ಯ, ಉದ್ಧರಣಿಗದ್ಯ ಮುಂತಾದ ರಚನೆಗಳಿವೆ.

**ರಗಳೆಗಳು** : ಹರಿಹರನ ರಗಳೆಗಳ ನಂತರ 16–17ನೇ ಶತಮಾನದಲ್ಲಿ ಹಲವು ಬಗೆಯ ರಗಳೆಗಳ ರಚನೆಯಾಯಿತು. ಬಸವೇಶ್ವರ ಪವಾಡದ ರಗಳೆ, ಅಷ್ಟಾವರಣ ಸ್ತೋತ್ರದ ರಗಳೆ, ಅಸಂಖ್ಯಾತ ರಗಳೆ, ರುದ್ರಾಕ್ಷಿ ರಗಳೆ, ಮೊದಲಾದವು ಪ್ರಮುಖವಾಗಿವೆ.

ಭಕ್ತಿ ಪ್ರಧಾನವಾದ ಇನ್ನೂ ಹಲವು ಸಾಹಿತ್ಯ ಪ್ರಕಾರದ ರಚನೆಗಳು ಈ ಕಾಲದಲ್ಲಿ ಬಂದವು. ಚಿಕ್ಕ ಕವನ ರೂಪದಲ್ಲಿ ವಾರ್ಧಕಗಳು, ದಂಡಕಗಳು, ವೃತ್ತಗಳು, ಸ್ತೋತ್ರರೂಪದ ಅಷ್ಟೋತ್ತರಗಳು, ಶಾರದೆಗಳು, ಕಲ್ಯಾಣಗಳು ಇತರ ಸ್ತೋತ್ರ ಪದ್ಯಗಳು, ಹಾಡುಗಳು, ಕಾಲಜ್ಞಾನದ ವಚನಗಳು ಹಾಗೂ ಅನೇಕ ಚಂಪೂ ಗ್ರಂಥಗಳು ಹೀಗೆ ಬಹುಮುಖ ಸಾಹಿತ್ಯ ರಚನೆಯಾಯಿತು. ವಿರಕ್ತ ತೋಂಟದಾರ್ಯನು 'ಕರ್ನಾಟಕ ಶಬ್ದಮಂಜರಿ' ಎಂಬ ನಿಘಂಟನ್ನು ರಚಿಸಿದನು. ಇದಲ್ಲದೆ ಅಲಿಖಿತ ಜಾನಪದ ಸಾಹಿತ್ಯವು ಮನೆಮಾತಾಗಿತ್ತು. ಕನ್ನಡ ಮಾತ್ರವಲ್ಲದೇ ಶರಣ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಹಲವು ಸಂಸ್ಕೃತ ಕೃತಿಗಳೂ ಬಸವೋತ್ತರ ಕಾಲದಲ್ಲಿ ರಚಿತವಾಗಿವೆ. ಷಡಕ್ಷರ ಕವಿಯ 'ಶಿವಾಧಿಕ್ಯ ಭಕ್ತಾಧಿಕ್ಯ' ಚನ್ನಸದಾಶಿವಯೋಗಿಯ 'ಶಿವಯೋಗ ಪ್ರದೀಪಿಕೆ' ಮೋನಪ್ಪನ 'ವೀರಶೈವಾಚಾರ ಕೌಸ್ತುಭ' ಕೆಳದಿ ಬಸವ ರಾಜನ 'ಶಿವತತ್ವ ರತ್ನಾಕರ' ಗಿರಿದೇವನ 'ವೀರಶೈವಾಚಾರ ಪ್ರದೀಪಿಕೆ' ಸೋಸಲೆ ರೇವಣಾರಾಧ್ಯರ 'ಪರಮಾತ್ಮ ಪ್ರಕಾಶಿಕಾ' ಹೀಗೆ ಹಲವು ಸಂಸ್ಕೃತ ಭಾಷಾಂತರಗಳು ರಚನೆಯಾಗಿದ್ದದು ಕಂಡುಬರುತ್ತದೆ.

ನಂತರ 18 ಮತ್ತು 19ನೇ ಶತಮಾನಗಳಲ್ಲಿ ಶರಣ ಸಾಹಿತ್ಯ ಅಷ್ಟೊಂದು ರಚನೆಯಾಗಿರುವುದಿಲ್ಲ. 20ನೇ ಶತಮಾನದಲ್ಲಿ ಈ ಸಾಹಿತ್ಯಕ್ಕೆ ಮತ್ತೆ ಶುಕ್ರದೆಶೆ ಬಂದಿತು. ಡಾ.ಫ.ಗು. ಹಳಕಟ್ಟಿಯವರು ಅಳಿವಿನ ಅಂಚಿನಲ್ಲಿದ್ದ 12ನೇ ಶತಮಾನದ ವಚನಗಳನ್ನು ಸಂಶೋಧಿಸಿ ಸಂಪಾದಿಸಿ ಪ್ರಕಟಿಸಿದರು. ಶರಣರ ಚರಿತ್ರೆಗಳನ್ನು ಬರೆದರು. ಶಿವಾನುಭವ ಪತ್ರಿಕೆ ಹೊರ ತಂದರು. ಹರ್ಡೇಕರ ಮಂಜಪ್ಪನವರು ಬಸವಾದಿ ಶರಣರ ಚರಿತ್ರೆಗಳನ್ನು ಬರೆದರು. ವಚನಗಳನ್ನು ಮುದ್ರಿಸಿ ಪ್ರಸಾರ ಮಾಡಿದರು. ಬಸವ ಜಯಂತಿಯನ್ನು ಪ್ರಾರಂಭಿಸಿದರು. ಬಿ.ಪುಟ್ಟಸ್ವಾಮಯ್ಯನವರು 'ಉದಯರವಿ' ಯಿಂದ ಹಿಡಿದು 'ಕ್ರಾಂತಿಕಲ್ಯಾಣ' ದವರೆಗೆ ಆರು ಐತಿಹಾಸಿಕ ಕಾದಂಬರಿ ಬರೆದರು. ಎಮ್.ಆರ್. ಶ್ರೀನಿವಾಸಮೂರ್ತಿಯವರಿಂದ ವಚನ ಧರ್ಮಸಾರ, ಆರ್.ಆರ್. ದಿವಾಕರರವರಿಂದ 'ವಚನಶಾಸ್ತ್ರ ರಹಸ್ಯ' ಗ್ರಂಥಗಳು ಬರೆಯಲ್ಪಟ್ಟವು. ಎಸ್.ಎಸ್.ಬಸವನಾಳರು ಪ್ರಭುಲಿಂಗಲೀಲೆ, ಚೆನ್ನಬಸವ ಪುರಾಣ ಕೃತಿಗಳನ್ನು ರಚಿಸಿದರು. ಸಿದ್ಧಯ್ಯ ಪುರಾಣಿಕರ ಶರಣಚರಿತಾಮೃತ ಚರಿತೆ, ತಿಪ್ಪೇರುದ್ರಸ್ವಾಮಿಯವರ ಕರ್ತಾರನ ಕಮ್ಮಟ, ಕದಳಿಯ ಕರ್ಪೂರ, ಪರಿಪೂರ್ಣ ದೆಡೆಗೆ, ಅದರಂತೆ ಎಲ್.ಬಸವರಾಜು ಅವರ ಸಿದ್ಧರಾಮನ ನಿಜ ವಚನಗಳು ಅತ್ಯಂತ ಮೌಲಿಕ ಕೃತಿಗಳಾಗಿವೆ. ಖ್ಯಾತ ಕವಿಗಳಾದ ಕುವೆಂಪು ಜಿ.ಎಸ್.ಶಿವರುದ್ರಪ್ಪ ಬೇಂದ್ರೆ ಗೋಕಾಕ, ಕಣವಿ, ಮೊದಲಾದವರು ಬಸವಾದಿ ಶರಣರ ಬಗ್ಗೆ ಕವನಗಳನ್ನು ಬರೆದಿದ್ದಾರೆ. 1993 ರಲ್ಲಿ ಎಂ.ಎಂ. ಕಲ್ಬುರ್ಗಿ ಯವರ ಪ್ರಧಾನ ಸಂಪಾದಕತ್ವದಲ್ಲಿ ಸಮಗ್ರ ವಚನ ಸಂಪುಟಗಳು ಹೊರಬಂದವು. ಎಂ.ಎಂ. ಅಂಗಡಿ ಯವರು ಇಂಗ್ಲಿಷಿನಲ್ಲಿ 'ಬಸವ ದರ್ಶನ' ಮಹತ್ವದ ಕೃತಿ ರಚಿಸಿದ್ದಾರೆ. ಭೂಸನೂರ ಮಠರ 'ಶೂನ್ಯ ಸಂಪಾದನೆಯ ಪರಾಮರ್ಶೆ' ಪಂಪ ಪ್ರಶಸ್ತಿ ಪಡೆದ ಕೃತಿಯಾಗಿದೆ. 21ನೇ ಶತಮಾನದಲ್ಲಿ ಶರಣ ಸಾಹಿತ್ಯ ಕುರಿತು ಪ್ರತಿ ವರ್ಷ ನೂರಾರು ಕೃತಿಗಳು ಹೊರಬರುತ್ತಿವೆ. ಡಾ: ಪ್ರದೀಪ ಕುಮಾರ ಹೆಬ್ರಿ, ರಮಜಾನ ದರ್ಗಾ, ಎಸ್.ಆರ್. ಗುಂಜಾಳ, ಎನ್.ಜಿ.ಮಹಾದೇವಪ್ಪ ಮೊದಲಾದವರು ಮಹತ್ವದ ಕೃತಿಗಳನ್ನು ರಚಿಸಿ ಶರಣ ಸಾಹಿತ್ಯವನ್ನು ಶ್ರೀಮಂತ ಗೊಳಿಸಿದ್ದಾರೆ. ಶರಣ ಸಾಹಿತ್ಯವು ಕನ್ನಡ ವಾಙ್ಮಯ ಪ್ರಪಂಚಕ್ಕೆ ಅತ್ಯಂತ ಮಹತ್ವದ ಕೊಡುಗೆ ನೀಡಿದೆ. ಅಮೂಲ್ಯವಾದ ಪ್ರಾಚೀನ ಶರಣ ಸಾಹಿತ್ಯ ಕೃತಿಗಳನ್ನು ರಕ್ಷಿಸಿಕೊಂಡು ಹೋಗಬೇಕಾದುದು ನಮ್ಮ ಕರ್ತವ್ಯವಾಗಿದೆ.





# ಮಹಾನುಭಾವ ಮಾದರ ಚೆನ್ನಯ್ಯ

– ಸಿದ್ಧಯ್ಯ ಪುರಾಣಿಕ *

"ಸೂಳೆಗೆ ಹುಟ್ಟಿದ ಕೂಸಿನಂತೆ ಆರನಾದೊಡೆಯೂ ಅಯ್ಯ ಎನಲಾರೆನಯ್ಯಾ. ಚೆನ್ನಯ್ಯ ನೆಮ್ಮಯ್ಯನು. ಚೆನ್ನಯ್ಯನ ಮಗ ನಾನು. ಚೆನ್ನಯ್ಯನ ಮನೆಯ ದಾಸನ ಮಗ ನಾನು. ಚೆನ್ನಯ್ಯನೆನ್ನ ಮುತ್ತಯ್ಯನಜ್ಜನಪ್ಪಯ್ಯ. ಅಯ್ಯಗಳ ಅಯ್ಯ ನಮ್ಮ ಮಾದಾರ ಚೆನ್ನಯ್ಯ. ಕುಲತಿಲಕ ನಮ್ಮ ಮಾದಾರ ಚೆನ್ನಯ್ಯ. ಉನ್ನತ ಮಹಿಮ, ಉಮೇಶನಿಂದಧಿಕ. ಚಿಕ್ಕಯ್ಯ ಚೆನ್ನಯ್ಯಗಳೆತ್ತಿ ಮುದ್ದಾಡಿದರೆನ್ನ. ಮಹಾದಾನಿ ಕೂಡಲ ಸಂಗಮ ದೇವಾ, ಮಾದಾರ ಚೆನ್ನಯ್ಯನ ಮಗ ನಾನಯ್ಯ!"

ಬಸವಣ್ಣನವರಂಥವರು ಇಷ್ಟು ಮನವುಕ್ಕಿ, ಮೈಯುಬ್ಬಿ ಕೊಂಡಾಡಿರುವ ಈ ಚೆನ್ನಯ್ಯನಾರು? ಈ ಮಹಾನುಭಾವ ನನ್ನು ಎಷ್ಟು ಹೊಗಳಿದರೂ ತೃಪ್ತಿಯಿಲ್ಲ ಬಸವಣ್ಣನವರಿಗೆ. "ಅಪ್ಪನು ನಮ್ಮ ಮಾದಾರ ಚೆನ್ನಯ್ಯ, ಬೊಪ್ಪನು ನಮ್ಮ ಡೋಹರ ಕಕ್ಕಯ್ಯ, ಚಿಕ್ಕಯ್ಯನೆಮ್ಮಯ್ಯ ಕಾಣಿರಯ್ಯ" "ನಡೆ ಚೆನ್ನ, ನುಡಿ ಚೆನ್ನ, ಎಲ್ಲಿ ನೋಡಿದೊಡೆ ಚೆನ್ನ. ಪ್ರಮಥರೊಳಗೆ ಚೆನ್ನ, ಪುರಾತನರೊಳಗೆ ಚೆನ್ನ, ಸವಿದು ನೋಡಿ ಅಂಬಲಿ ರುಚಿಯಾಯಿತ್ತೆಂದು ಕೂಡಲ ಸಂಗಮದೇವಂಗೆ ಬೇಕೆಂದು ಕೈದೆಗೆದ ನಮ್ಮ ಚೆನ್ನ". "ಹಾಲ ನೇಮ, ಹಾಲ ಕೆನೆಯ ನೇಮ, ಕೆನೆಯ ತಪ್ಪಿದ ಬಳಿಕ ಕಿಚ್ಚಡಿಯ ನೇಮ, ಬೆಣ್ಣೆಯ ನೇಮ, ಬೆಲ್ಲದ ನೇಮ–ಅಂಬಲಿಯ ನೇಮದವರಾರನೂ ಕಾಣೆ. ಕೂಡಲ ಸಂಗನ ಶರಣರಲ್ಲಿ ಅಂಬಲಿಯ ನೇಮದಾತ ಮಾದಾರ ಚೆನ್ನಯ್ಯ!" "ವೇದ ನಡನಡುಗಿತ್ತು, ಶಾಸ್ತ್ರವಗಲಿ ಕೆಲಕ್ಕೆ ಸಾರಿದುದಯ್ಯ! ತರ್ಕ ತರ್ಕಿಸಲರಿಯದೆ ಮೂಗು ವಟ್ಟಿದ್ದಿತಯ್ಯಾ. ಆಗಮ ಹೊರತೊಲಗಿ ಆಗಲಿದ್ದಿತಯ್ಯ– ನಮ್ಮ ಕೂಡಲ ಸಂಗಮಯ್ಯನು ಚೆನ್ನಯ್ಯನ ಮನೆಯಲುಂಡ ಕಾರಣ!"

ಬಸವಣ್ಣನವರ ಈ ಭಾವಪೂರಿತ ವಚನಗಳನ್ನೋದು ತಿದ್ದಂತೆ ಚೆನ್ನಯ್ಯನ ಮಹೋನ್ನತ ವ್ಯಕ್ತಿತ್ವ ಕಣ್ಣೆದುರು ರೂಪುಗೊಳ್ಳುತ್ತದೆ. "ಉನ್ನತ ಮಹಿಮ, ಉಮೇಶನಿಂದಧಿಕ!" ಇದಕ್ಕಿಂತ ಅಧಿಕವಾದ ವ್ಯಕ್ತಿಚಿತ್ರ ವನ್ನಾರು ಬರೆಯಬಲ್ಲರು ನಾಲ್ಕೇ ನಾಲ್ಕು ಶಬ್ದಗಳಲ್ಲಿ! ಬಸವಣ್ಣನವರಿಂದ ಇಷ್ಟೊಂದು ವಿಧವಿಧವಾಗಿ ಸ್ತುತಿಸಿ ಕೊಂಡ ಮಾದಾರ ಚೆನ್ನಯ್ಯ ನಿಜವಾಗಿಯೂ ಮಹಾನುಭಾವ.

ಕಂಚಿಯಲ್ಲಿ ಕೂಡ ಕನ್ನಡದ ಕಹಳೆ ಮೊಳಗುವಂತೆ ಮಾಡಿದ ಮಹಾತ್ಮನೀತ. 'ಪೆರಿಯ ಪುರಾಣ'ವನ್ನು ಬರೆಸಿ ಶಿವಭಕ್ತಶಿರೋಮಣಿಯೆನಿಸಿ ಮೆರೆಯುತ್ತಿದ್ದ ಕರಿಕಾಲ ಚೋಳನು ಕಾಂಚಿಯಲ್ಲಿ ರಾಜ್ಯವಾಳುತ್ತಲಿದ್ದ ಕಾಲವದು. ಚೆನ್ನಯ್ಯ ಕಾರಿಕಾಲ ಚೋಳನ ಅಶ್ವಾಲಯಕ್ಕೆ ಹುಲ್ಲು ಒದಗಿಸುವ ಕಾಯಕ ಕೈಕೊಂಡಿದ್ದ. ಈ ಕಾಯಕವನ್ನೇ ಜೀವನಾಧಾರವನ್ನಾಗಿ ಮಾಡಿಕೊಂಡಿದ್ದ ಕಬಾಡಿಗರಿಗೆಲ್ಲ ಹಿರಿಮಣಿಯಾತ.

ಈ ಲಿಂಗಾಭಿಮಾನಿ, ಲಿಂಗಾನುಭಾವಿ, ಲಿಂಗಪ್ರಾಣಿಯು ನಿತ್ಯವೂ ಈ ಕಬಾಡಿಗರನ್ನು ಕೂಡಿಕೊಂಡು ಕಾನನಕ್ಕೆ ಹೋಗುತ್ತಿದ್ದ. ಅಲ್ಲಿ ಎಲ್ಲರೂ ಕೂಡಿ ಹುಲ್ಲು ಕೊಯ್ದು ಹೊರೆ ಕಟ್ಟುತ್ತಿದ್ದರು. ಉಳಿದವರು ಅಷ್ಟರಿಂದಲೇ ತುಷ್ಟರಾದರೆ ಚೆನ್ನಯ್ಯನ ಪರಿವೇ ಬೇರೆ. ತನುವು ಚೋಳ, ನಿಗಾಳ ಮನವು ಲಿಂಗದಿ ಮೇಳ, ವ್ಯಕ್ತದಿ ಮಾದಾರ, ಗುಪ್ತದಿ ಮಹೇಶ್ವರನಾಗಿ ಬಾಳುತ್ತಿದ್ದನಾತ.

*"ಒಳಗೆ ಭಕ್ತಿಯ ಗುಣ್ಪು ಹೊರಗೆ ಜಾತಿಯ ಸೊಂಪು*
*ಒಳಗೆ ಮುಕ್ತಿಯ ನುಣ್ಪು ಹೊರಗೆ ಜನ್ಮದ ಪೆಂಪು*
*ತಿಲದ ತೈಲದ ತೆರದೆ ಕಾಷ್ಠದಗ್ನಿಯ ತೆರದೆ*
*ನೆಲದ ಮರೆಯೊಳಗೆ ತೋರುವ ನಿಧಾನದ ತೆರದೆ*
*ಪೆರರರಿಯದಂತೊಳಗೆ ಲಿಂಗಾರ್ಚನೆಯೊಳಿರ್ಪ*
*ಅರಿವಂತೆ ಹೊರಗೆ ಕುಲಧರ್ಮ ಕರ್ಮದೊಳಿರ್ಪ*
*ಆತನ ಶಿವಾರ್ಚನೆಯನೆಳೆಸಲೆನ್ನಳವಲ್ಲ*
*ಭೂತೇಶ್ವರಂಗೆ ಕೌತುಕಂ, ಉಳಿದವರ್ಗಳವಲ್ಲ"*

ಎಂದು ಹರಿಹರ ಮಹಾಕವಿಯ್ಯವನ ಶಿವಮಾನಸ ಪೂಜೆಯ ಸೊಗಸನ್ನು ಚಿತ್ರಿಸಿದ್ದಾನೆ.

ಚೆನ್ನಯ್ಯ ಕಂಡುದುದ ಶಿವಲಿಂಗಕ್ಕೆ, ಕೊಂಡುದುದ ಗುರುಲಿಂಗಕ್ಕೆ, ಕೇಳಿದುದ ಪ್ರಸಾದಲಿಂಗಕ್ಕೆ, ವಾಸಿಸಿದುದ ಆಚಾರಲಿಂಗಕ್ಕೆ, ಸ್ಪರ್ಶಿಸಿದುದ ಜಂಗಮ ಲಿಂಗಕ್ಕೆ, ನೆನೆದುದ ಮಹಾಲಿಂಗಕ್ಕೆ ಅರ್ಪಿಸುವುದನ್ನು ಅಳವಡಿಸಿಕೊಂಡಿದ್ದ ಅನುಭಾವಿ, ತನ್ನ ಷಡಿಂದ್ರಿಯಗಳಲ್ಲಿ ಷಡ್ಲಿಂಗಗಳನ್ನು ಧರಿಸಿ ಸರ್ವವನ್ನು ಶಿವಾರ್ಪಿತ ಮಾಡುತ್ತಲಿದ್ದ ಶಿವಶರಣ.

*"ಕಂಡ ಚೆಲ್ವಕ್ಕಿ ಮುಖದಿಂದ ಲಿಂಗಾರ್ಪಿತಂ*
*ಕೊಂಡ ನಾಲಗೆಯ ರುಚಿಯಿಂದಲರ್ಪಿತಂ*
*ಕೇಳ್ದ ಸವಿನುಡಿ ಕಿವಿಯ ಮುಖದಿಂದಲರ್ಪಿತಂ*
*ತಾಳ್ದ ಗಂಧಂ ನಾಸಿಕದ ಮುಖದೊಳರ್ಪಿತಂ*
*ಸೋಂಕಿದ ಮೃದುದ್ರವ್ಯವಂಗದಿಂದರ್ಪಿತಂ*
*ಮುಂತೆಳಸಿ ನೆನೆದ ರುಚಿ ಮನದಿಂದಲರ್ಪಿತಂ"*

ಒಟ್ಟಿನಲ್ಲಿ ಅದೊಂದು ಅನುಭಾವಕ್ಕೆ ಅರ್ಪಿತವಾದ ಬಾಳು.

ಹುಲ್ಲು ಕೊಯ್ದು ಹೊರೆ ಕಟ್ಟುವವರೆಗೆ ಅಂತರಂಗದಲ್ಲಿ ಪೂಜೆ, ಈ ಹೊರೆ ಮುಗಿಯುತ್ತಲೆ ಬಹಿರಂಗದಲ್ಲಿ ಪೂಜೆ. 'ಸೂರಿಜನ ಹರ್ಷ ವಿಸ್ತಾರಿ' ಯಾದ ಕಾವೇರಿಯ ತೀರದಲ್ಲೊಂದು ತಣ್ಣೆಳಲ ತಾಣ. ಅಲ್ಲೊಂದು ಮಲ್ಲಿಗೆಯ ಮಂಟಪ. ಅಲ್ಲಿ ನುಣ್ಮಳಲಿ ಕಟ್ಟೆಯ ಕಟ್ಟಿ ತಳಿರ ಹಾಸನ್ನು ಹಾಸಿ ಲಿಂಗಪೂಜೆಗೆ ಕೂರುವನು.

*"ಬಾರಯ್ಯ ಬಾರ ಶಿವಭಕ್ತೈಕ ಬಂಧುವೆ*
*ಬಾರಯ್ಯ ಬಾರ ಕಾರುಣ್ಯರಸ ಸಿಂಧುವೆ*
*ಗುರುವೆ ವರಗುರುವೆ ಸದ್ಗುರುವೆ ಗುರುಲಿಂಗವೆ*
*ಭರದಲರ್ಚಿಪ ಜನದ ಮನದ ಸರ್ವಾಂಗವೆ"*

ಎಂದು ಸೆಜ್ಜೆಯಿಂದ ಶಿವನ ಕುರುಹಾದ ಲಿಂಗವನ್ನು ತೆಗೆದು, ಕರದ ಸರಸಿಜ ಪೀಠದಲ್ಲಿರಿಸಿ, ಅಗ್ಗವಣಿಯನೆರೆದು, ಮೊಲ್ಲೆ ಮಲ್ಲಿಗೆಗಳನ್ನು ಧರಿಸಿ ಹೊಂಗಿ ಹೊರೆಯೇರಿ,

*"ಅಡಿಗಡಿಗೆ ನೋಡಿ ಮಾತಾಡಿ ಮೈವೆರ್ಚುತುಂ*
*ಹಾಡಿ ತಣಿವುತೆ ಮತ್ತೆ ಮತ್ತೆ ಮಿಗೆ ಕೊರ್ಬುತುಂ*
*ಪುಳಕಿಸುತೆ ಪುಟವೇರಿ ತವಕಿಸುತೆ ಮದವೇರಿ*
*ಎಳಸುತಂ ದಳವೇರಿ ಬಳಸುತುಂ ಬಲ್ವೇರಿ*
*ನುಡಿಯುತಂ ಗದಗದಿಸಿ ಬೆಮರುತುಂ ಸಡಗರಿಸಿ*
*ನಡೆವುತುಂ ಡೆಂಡಣಿಸಿ ಬೀಳುತಂ ತರಹರಿಸಿ*
*ಮೆಲ್ಲನೆಚ್ಚತ್ತು ಶಿವಲಿಂಗಮಂ ನಡೆನೋಡಿ*
*ಲಲ್ಲೆಗೆರೆವುತ್ತೆ ಪರಮ ಸ್ನೇಹಮಂ ಮಾಡಿ"*

ಕಣ್ಣಲ್ಲಿ ಲಿಂಗಮೂರ್ತಿಯನ್ನು ತುಂಬಿಕೊಂಡು, ಮಾತಿನಲ್ಲಿ ಲಿಂಗ ಕೀರ್ತಿಯನ್ನು ತುಂಬಿಕೊಂಡು, ಚಿತ್ತದಲ್ಲಿ ಲಿಂಗ ಪ್ರೀತಿಯನ್ನು ತುಂಬಿಕೊಂಡು ಎಲ್ಲರೊಡನೆ ಹುಲ್ಲ ಹೊರೆ ಹೊತ್ತು ಚೋಳರಾಯನ ಕುದುರೆಗಳ ಪಾಳೆಯಕ್ಕೆ ಬಂದು ಹುಲ್ಲ ಹೊರೆ ಹಾಕಿ ಮನೆಗೆ ಬರುತ್ತಿದ್ದನು.

ಅಲ್ಲಿ ಚೆನ್ನಯ್ಯಗಳ ಪುಣ್ಯಾಂಗನೆ ಅಂಬಲಿಯನ್ನು ಮಾಡಿ ಆತನ ಬರವನ್ನೇ ನಿರೀಕ್ಷಿಸುತ್ತ ಕುಳಿತಿರುತ್ತಿದ್ದಳು. ಚೆನ್ನಯ್ಯನು ಆ ಅಂಬಲಿಯಲ್ಲಿ ತನ್ನ ಭಕ್ತಿಯ ಅಮೃತವನ್ನು ಬೆರೆಸಿ ಶಿವನಿಗರ್ಪಿಸಿ ತಾನೂ ಸೇವಿಸುತ್ತಿದ್ದಳು. ಆ ಅಂಬಲಿಯ ರುಚಿಗೆ ಶಿವನ ಬಾಯಲ್ಲಿ ನೀರೂರುತ್ತಿತ್ತು. ಒಲವಿದ್ದಲ್ಲಿ ಅಂಬಲಿಯೇ ಅಮೃತ, ಕಂಬಳಿಯೇ ಚೀನಾಂಬರವಲ್ಲವೆ?

ಚೆನ್ನಯ್ಯನ ಗುಪ್ತ ಭಕ್ತಿ ಹೀಗೆಯೇ ಸಾಗಿತು. ಅರವತ್ತು ವರ್ಷಗಳು ಕಳೆದವು. ಆದರೂ ಶಿವನೊಬ್ಬನನ್ನುಳಿದು ಇನ್ನಾರಿಗೂ ಚೆನ್ನಯ್ಯನ ನನ್ನಿಯ ಭಕ್ತಿ ಗೊತ್ತಿರಲಿಲ್ಲ. ಎಲ್ಲರ ಕಣ್ಣಿನಲ್ಲಿ ಅವನೊಬ್ಬ ಕರಿಕಾಲ ಚೋಳನ ಕುದುರೆ ಗಳಿಗೆ ಹುಲ್ಲು ತಂದೊದಗಿಸುವ ಕೂಲಿಕಾರ. ಕುಲದಿಂದ ಮಾದರವನು, ವೃತ್ತಿಯಿಂದ ಕೂಲಿಕಾರ. ಶಿವನಿಗಿದನ್ನು ಸೈರಿಸಲಾಗಲಿಲ್ಲ. ತನ್ನ ಭಕ್ತರಲ್ಲಿಯೇ ಶ್ರೇಷ್ಠನಾದ, ಗರಿಷ್ಠನಾದ ಚೆನ್ನಯ್ಯನಿಂತು ಅಜ್ಞಾತನಾಗಿಯೆ ಉಳಿಯಬೇಕೇ? ಅನ್ಯರಿಗೆ ಈತನ ಹಿರಿಮೆ ಗರಿಮೆಗಳು ಗೊತ್ತಾಗಲೇಬಾರದೆ? ಇದು ಸರಿಯಲ್ಲ. ಒಮ್ಮೆ ಜಗತ್ತಿಗೆಲ್ಲ ಈ ಜಗದ್ವಂದ್ಯನ ನಿಜಸ್ವರೂಪ ಗೊತ್ತಾಗಲೇಬೇಕು. ಘನತೆಯ ಗುರುತು ಧನವಲ್ಲ, ಮನವೆಂಬುದು ಲೋಕಕ್ಕೆ ಮನದಟ್ಟಾಗಬೇಕು.

ಒಮ್ಮೆ ಚೆನ್ನಯ್ಯ ರಾತ್ರಿಯಲ್ಲಿ ಅಂಬಲಿ ಸುರಿಯುತ್ತಿರುವಾಗ ಶಿವನೂ ಲವಲವಿಸಿ ಅದನ್ನು ಸುರಿದು ಸಂತೃಪ್ತನಾದನು. ಕರಿಕಾಲ ಚೋಳನಿಗೆ ಚಿಂತೆಯುಂಟಾಗಿದ್ದಿತಂತೆ–ನಾನು ಮುದುಕನಾದೆ, ನನ್ನ ತರುವಾಯ





ಶಿವನಿಗೆ ಸಕಲ ನೈವೇದ್ಯಗಳನ್ನು ಸಲ್ಲಿಸುವರಾರೆಂದು! ಆತನ ಮಮಕಾರ ನಿರಸನಕ್ಕಾಗಿ ಚೆನ್ನಯ್ಯನ ಮನೆಯಲ್ಲಿ ಉಂಡನಂತೆ ಶಿವನು.

*"ಕೊಂಡನೇನೆಂಬೆನಾಂ ಚೆನ್ನಯ್ಯನೊಂದಾಗಿ*
*ಉಂಡನಭವಂ ಸ್ವರ್ಗಮರ್ತ್ಯಕ್ಕೆ ಪೊಸತಾಗಿ*
*ಒಂದು ಸುರಿಯೊಳಗೆ ಕೈವಂದುದೇ ಶಿವಪದಂ*
*ಮುಂದೆ ಸವಿದರ್ಪಿಸುವದಕ್ಕೆಲ್ಲ ಘನಪದಂ*
*ಎಂದಂಜಿಕೊಂಡನಾ. ಶಿವನು !....."*

ಮೊದಲನೆಯ ಸುರುಗಿಗೇ ಶಿವಪದವನ್ನು ಕೊಟ್ಟು ಬಿಟ್ಟ; ಮುಂದಿನ ಸುರುಗಿಗಳಿಗಿನ್ನೇನು ಕೊಡಲೆಂದು ಶಿವನೇ ಚಿಂತಿಸಿದನಂತೆ! ಅದೆಂಥ ಅಂಬಲಿ ಚೆನ್ನಯ್ಯನದು!

ಬೆಳಗಾಯಿತು–ಇಂದು ಚೆನ್ನಯ್ಯನ ಭಕ್ತಿ ಭುವಿಯಲ್ಲೆಲ್ಲ ಬೆಳಗುವುದೆಂಬುದನ್ನು ಸಾರುತ್ತ. ಕರಿಕಾಲ ಚೋಳ ಎಂದಿನಂತೆ ಮುಂಜಾನೆಯ ಪೂಜೆಗಾಗಿ ದೇವಾಲಯಕ್ಕೆ ಬಂದನು. ರಾಜೋಚಿತವಾಗಿ ಪೂಜಾದಿಗಳನ್ನು ಮುಗಿಸಿ ದಿವ್ಯಾನ್ನ, ದೇವಾನ್ನ, ಅಮೃತಾನ್ನಗಳನ್ನಿರಿಸಿ 'ಆರೋಗಿಸು ತಂದೆ' ಎಂದು ತೆರೆಯ ಹಿಂದೆ ನಿಂತನು. ಸ್ವಲ್ಪ ಹೊತ್ತು ತಡೆದು ಬಂದು ನೋಡುತ್ತಾನೆ–ಎಂದಿನಂತೆ ಶಿವನವುಗಳನ್ನು ಸೇವಿಸದೆ ಸುಮ್ಮನಿದ್ದಾನೆ. ಚೋಳರಾಯನ ಕರುಳಿಗೆ ಚೇಳು ಕಡಿದಂತಾಯಿತು. ಖಡ್ಗವನ್ನೆಳೆದು ಕಂಠವನ್ನು ಕತ್ತರಿಸಿ ಕೊಳ್ಳಲು ಮೇಲೆತ್ತಿದನು.

*"ಓರೆಯ ಕತ್ತಿಯ ಚೋಳ ಹಿರಿದು ಕತ್ತಿಗೆ ಇಡಲು*
*ಕೊರಳ ಶಿವಲಿಂಗ ಕೈಹಿಡಿದು–ಎಲೆ ಚೋಳ*
*ತರವಲ್ಲ ಹತ್ಯೆ ಭಕ್ತನಿಗೆ..."*
*ಸೈರಿಸು ಸೈರಿಸು ಚೋಳ ಭೂಪಾಲ"*

ಎಂದು ಶಿವನದನ್ನು ತಡೆದು, "ಚೆನ್ನಯ್ಯನ ಅಂಬಲಿಯು ಬಹಳ ರುಚಿಯಾಗಿದ್ದುದರಿಂದ ಬಹಳ ಸುರಿದುಬಿಟ್ಟೆ ಇಂದು ಹಸಿವೆ ಇಲ್ಲ. ನೀನು ಬೇರೆ ಭಾವಿಸಿಕೊಳ್ಳಬೇಡ" ಎಂದು ಸಂತೈಸಿದನು. ಚೆನ್ನಯ್ಯನ ಅಂಬಲಿ! ಶಿವನದನ್ನು ಸವಿದು ತನ್ನ ರಾಜಾನ್ನವನ್ನು ಧಿಕ್ಕರಿಸಿದ! ಚೋಳರಾಯನು ಬೆರಗಾದ.

*"ತೋರಿರೇ ಚಂದ್ರಮೌಳಿಯ ಭಕ್ತ ಚೆನ್ನನಂ ತೋರಿರೇ*
*ಷಡ್ವರ್ಗ ಕರ್ಣನಂ ಚೆನ್ನನಂ ತೋರಿರೇ*
*ಚೆನ್ನನಂ ತೋರಿ ಎನ್ನಂ ಕಾಯ್ದುಕೊಳ್ಳಿರೇ*
*ಚೆನ್ನಯ್ಯ ನೆನ್ನಯ್ಯ ನಿರ್ದೇಹೆಯನರುಪಿರೇ*
*ಚೆನ್ನಯ್ಯನಿರ್ಪ ಗುಡಿಯಿದೇ ಎಂದು ತೋರಿರೇ*
*ಚೆನ್ನಯ್ಯ ಭಕ್ತನೆನ್ನಯ್ಯನಂ ತೋರಿರೇ...."*

ಎಂದು ಹಲುಬುತ್ತ, ಕಾಂಚೀ ಪಟ್ಟಣದ ಸಂದಿಗೊಂದಿಗಳನ್ನೆಲ್ಲ ಅರಸುತ್ತ, ಕೇರಿಯಲ್ಲಿದ್ದ ಚೆನ್ನಯ್ಯನ ಕುಟೀರಕ್ಕೆ ಬಂದನು. ಹಿಂದೆ ಹಿಂದೆ ರಾಜದೂತರೂ ರಾಜಪರಿಹಾರವೂ ಬಂದವು. ಚೆನ್ನಯ್ಯ ಗಾಬರಿಯಾದ. ಚೋಳರಾಯ–

*"ಭಕ್ತಿಗುಡಿಸಿರ್ದ ಗುಡಿಸಲೊಳಿರ್ಪನಂ ಕಂಡು*
*ಮುಕ್ತಿ ಮೂವಡಿಸಿ ಮುಂದಡಸಿರ್ದನಂ ಕಂಡು*
*ಪುಳಕಿಸುತೆ ಪುಟವೇರುತುರ್ಬುತುಂ*
*ಕೋರ್ಬುತುಂ ಇಳಿವಶ್ರು ಜಲದಿಂದೆ ಮೂಡುತಂ*
*ಮುಳುಗುತಂ ಎನ್ನೊಡೆಯನಿದನಿದನೆ*
*ಚೆನ್ನಯ್ಯನೆಂದೆನುತ ಎನ್ನ ಸುಧೆಯಿದನಿದನೆ*
*ಚೆನ್ನಯ್ಯನೆಂದೆನುತ ಇಳುಪಿದಂ ಸರ್ವಾಂಗಮಂ*
*ಚೆನ್ನನಂಘ್ರಿಯೊಳ್!"*

ಚೆನ್ನಯ್ಯ ಚಿತ್ತವಿಹ್ವಲನಾಗಿ, 'ಏನಿದು ದೊರೆಗಳೆ, ಕುಲಹೀನನಾದ ನನಗೆ ಸೂರ್ಯಕುಲೋತ್ಪನ್ನ ಸಾರ್ವಭೌಮರಾದ ತಾವು ನಮಸ್ಕರಿಸುವುದೇ! ಎಂಥ ಅನುಚಿತ ವಿದು' ಎಂದನು. ಅದಕ್ಕೆ ಚೋಳರಾಯನಿತ್ತ ಉತ್ತರ ಸರ್ವಾಗಮ ಸಾರ.

*"ಎಲೆ ದೇವ! ದೇವನೊಬ್ಬನ ಕುಲಂ ಸತ್ಕುಲಂ*
*ಘನಮಹಿಮನೊಲ್ದ ಜಾತಿಯೇ ಜಾತಿ ನಿರ್ಮಲಂ*
*ಶರ್ವನೊಡನುಂಡ ನಿಮ್ಮಯ ಜಾತಿಗಾಂ ಸರಿಯೆ?*
*ಸರ್ವಜ್ಞ ನಿಮ್ಮ ಕೆರವಿಂಗೆನ್ನ ಶಿರ ಸರಿಯೆ?"*

ಮುಂದೆ ಬಸವಣ್ಣನವರ ಬಾಯಿಂದ ಹೊರಟ "ಕುಲವೇನೋ, ಆವಂದಿರ ಕುಲವೇನೋ? ಸಕಲ ಜೀವಾತ್ಮರಿಗೆ ಲೇಸನೇ ಬಯಸುವ ನಮ್ಮ ಕೂಡಲಸಂಗನ ಶರಣರೇ ಕುಲಜರು!" "ನೀನೊಲಿದ ಕುಲಕ್ಕೆ ನೀನೊಲಿಯದ ಹೊಲೆಗೆ ಮೇರೆಯುಂಟೇ ದೇವಾ?" "ದೇವ ನಿಮ್ಮ ನಂಬದವನೇ ಹೊಲೆಯ!" "ದೇವ ನಿಮ್ಮ ಶರಣರ ಚಮ್ಮಾವುಗೆಗಳಿಗೆ ಈ ಪೃಥ್ವಿ ಸರಿ ಬಾರದಯ್ಯ" ಎಂಬ ವಚನಗಳಿಗೆ ಪೂರ್ವಪೀಠಿಕೆಯಂತಿದೆ ಈ ಉತ್ತರ.

ತನ್ನ ಗುಪ್ತ ಭಕ್ತಿಯನ್ನಿಂತು ಬಯಲಿಗೆಳೆದುದಕ್ಕಾಗಿ ಚೆನ್ನಯ್ಯ ಶಿವನ ಮೇಲೆ ಸಿಟ್ಟಾಗಿ ತನ್ನ ಶಿರ ಕೊಯ್ದುಕೊಳ್ಳಲು ಮುಂದಾದನಂತೆ.

"ಶಿವಲಿಂಗ ಕಾಣುತಲಿ ಶಿವನೆಂದು ಚೆನ್ನಯ್ಯ
ಅವಸರದಿ ಹೊಕ್ಕು ಗುಡಿಯನ್ನು-ಕೇಳಿದನು
ಶಿವ ನಿನಗೆ ತರವೆ ಈ ಆಟ?
ಹಿಡಿಸೆನ್ನ ತರಿಸಿದಿರಿ ಒಡೆಯ ಚೋಳನ ಕೂಡ
ಕಡುಮಾತು ಹೇಳು ಮಾಡಿರುವ ಅಪರಾಧ
ಬಡಭಕ್ತನಾಗಿ ನಾನಿದ್ದೆ
ಬೇಡಿಲ್ಲ ಪದವಿಯನು ಕಾಡಿಲ್ಲ ಕೊಡದಿರಲು
ಮಾಡಿ ಶಿವಭಕ್ತಿ ಅರಿಯದಲೆ ನಾನಿದ್ದೆ
ಕೇಡು ಜನಕೇಳಿ ನಾನಿರಲೆ?
ಇದೆ ಕೊಳ್ಳಿ ಶಿವ ನಿನ್ನ ಹದವಾದ ಶಿವಭಕ್ತಿ
ಎದೆಮಾತು ಎಂದು ಕಂಭಕ್ಕೆ-ತಲೆಗೊಡಲು
ಸದರು ಝಗಝಗಿಸಿ ಶಿವನಿದ್ದ"

ಶಿವನಾತನನ್ನು ಎಂತೋ ರಮಿಸಿ ಶಿವಪದವನ್ನಿತ್ತನಂತೆ. ಚೋಳರಾಯ ಚೆನ್ನಯ್ಯನನ್ನು ಆನೆಯ ಮೇಲೆ ಅಂಬಾರಿಯಲ್ಲಿ ಕುಳ್ಳಿರಿಸಿ ನಗರದಲ್ಲೆಲ್ಲಾ ಮೆರೆಸಿದನಂತೆ. ಇವಾವೂ ಮುಖ್ಯವಲ್ಲ. ಮಾದರವನಾಗಿ ಹುಟ್ಟಿ ವೇದವನ್ನೋದುವವರಿಗೂ ಪೂಜ್ಯನಾದ ಚೆನ್ನಯ್ಯನ ಗುಪ್ತಭಕ್ತಿ, ನಿಷ್ಕಾಮ ಭಕ್ತಿ, ನಿರಾಡಂಬರ ಭಕ್ತಿ ಮುಖ್ಯವಾದುದು. ಸಂಖ್ಯೆ ಯಲ್ಲಿ ಸ್ವಲ್ಪವಾದರೂ ಅರ್ಥದಲ್ಲಿ ಅಲ್ಪವಲ್ಲದ ಅವನ ವಚನಗಳಲ್ಲಿ ಆತನ ಆದರ್ಶ ಹೆಪ್ಪುಗಟ್ಟಿದಂತಿದೆ. ಇದೊ ಕೇಳಿ:

"ನಡೆ ನುಡಿ ಸಿದ್ಧಾಂತವಾದಲ್ಲಿ ಕುಲಹೊಲೆ
ಸೂತಕವಿಲ್ಲ. ನುಡಿ ಲೇಸು, ನಡೆಯಧಮವಾದಲ್ಲಿ
ಅದೇ ಹೊಲೆ. ಇಲ್ಲವೆ ಹೊಲೆ ಪರದಾರಂಗಳಲ್ಲಿ?
ಹೊಲಬನರಿಯದೆ ಕೆಟ್ಟು ನಡೆಯುತ್ತ ಮತ್ತೆ
ಕುಲಜರೆಂಬ ಒಡಲಳವರುಂಟೆ? ಆಚಾರವೇ ಕುಲ,
ಅನಾಚರವೇ ಹೊಲೆ. ಇಂತೀ ಉಭಯವ ತಿಳಿದು
ಅರಿಯಬೇಕು. ಕಯ್ಯುಳಿಗತ್ತಿ ಅಡಿಗೂಂಟಕ್ಕೆಡೆಯಾಗಬೇಡ
ಅರಿನಿಜಾತ್ಮ ರಾಮ ರಾಮನ!"

ವೇದಶಾಸ್ತ್ರಕ್ಕೆ ಹಾರುವನಾಗಿ, ವೀರ ವಿತರಣಕ್ಕೆ ಕ್ಷತ್ರಿಯನಾಗಿ, ಸರ್ವವನಾರೈದು ನೋಡುವಲ್ಲಿ ವೈಶ್ಯನಾಗಿ ವ್ಯವಹಾರದೊಳಗಾಗಿ, ಕೃಷಿಯ ಮಾಡುವುದಕ್ಕೆ ಶೂದ್ರನಾಗಿ-ಇಂತೀ ಜಾತಿಗೋತ್ರದೊಳಗಾದ ನೀಚ ಶ್ರೇಷ್ಠವೆಂಬೆರಡು ಕುಲವಲ್ಲದೆ ಹೊಲೆ ಹದಿನೆಂಟು ಜಾತಿಯೆಂಬ ಕುಲವಿಲ್ಲ. ಬ್ರಹ್ಮವನರಿದಲ್ಲಿ ಬ್ರಾಹ್ಮಣ; ಸರ್ವಜೀವಹತಕ್ಕೊಳಗಾದಲ್ಲಿ ಸಮ್ಮಕಾರ. ಈ ಉಭಯವನರಿದು ಮರೆಯಲಿಲ್ಲ. ಕೈಯುಳಿಗತ್ತಿ ಅಡಿಗೂಂಟಕ್ಕೆಡೆಯಾಗಬೇಡ, ಅರಿ ನಿಜಾತ್ಮ ರಾಮ ರಾಮನ!

"ನರಕುಲ ಹಲವಾದಲ್ಲಿ ಯೋನಿಯ ಉತ್ಪತ್ತಿಯೊಂದೇ
ಭೇದ; ಮಾತಿನ ರಚನೆ ಎಷ್ಟಾದೊಡೇನು ನಿಹಿತವ
ನರಿವುದೊಂದೆ ಭೇದವಸ್ತು; ಜಾತಿಗೋತ್ರ ವಿಶೇಷವೆಂಬಲ್ಲಿ
ದಿವಾ ರಾತ್ರೆಯೆಂಬುಭಯವನಳಿವುದಕ್ಕೆ ಬೆಳಗೆರಡೆಂಬು
ದಲ್ಲದಿಲ್ಲ. ಕುಲ ಉಭಯಶಕ್ತಿ ಪುರುಷತ್ವವಲ್ಲದಿಲ್ಲ. ಬೇರೆ
ಹಲವು ತೆರನುಂಟೆಂದೊಡೆ ಮೀರಿ ಕಾಬ ಶ್ರುತದೃಷ್ಟ
ವಿನ್ನಾವುದು? ಎಲ್ಲಕ್ಕೂ ನೀರು, ನೆಲ, ಸೂರ್ಯ ಸೋಮ
ಆರೈದು ನೋಡುವ ದೃಷ್ಟಿಯೊಂದೇ. ಬೊಂಬೆ ಹಲವಂದ
ಕಾಣ್ಬಂತೆ ಅವರಂಗವ ತಿಳಿದು ನಿಂದಲ್ಲಿ ಹಲವು ಕುಲದ
ಹೊಲೆಯೊಂದೂ ಇಲ್ಲವೆಂದೆ. ಕೈಯುಳಿಗತ್ತಿ
ಅಡಿಗೂಂಟಕ್ಕೆಡೆಯಾಗಬೇಡ,
ಅರಿ ನಿಜಾತ್ಮ ರಾಮ ರಾಮನ!"

"ಸಾಂಖ್ಯ ಶ್ವಪಚ, ಅಗಸ್ತ್ಯ ಕಬ್ಬಿಲಿಗ, ದೂರ್ವಾಸ ಮಚ್ಚಿಗ,
ದಧೀಚಿ ಕೀಲಿಗ, ಕಶ್ಯಪ ಕಮ್ಮಾರ, ರೋಮಜ ಕಂಚುಗಾರ,
ಕೌಂಡಿಲ್ಯ ನಾವಿದ ನೆಂಬುದರಿದಮೇಲೆ ಕುಲ ಉಂಟೆಂದು
ಛಲಕ್ಕೆ ಹೋರಲೇತಕ್ಕೆ? ಇಂತೀ ಸಪ್ತ ಋಷಿಗಳೆಲ್ಲರು
ಸತ್ಯದಿಂದ ಮುಕ್ತರಾದರೆಂಬುದನರಿಯದೆ ಅಸತ್ಯದಲ್ಲಿ
ನಡೆದು "ನಾವು ವಿಪ್ರರು, ನಾವು ಘನ" ವೆಂದು ಹೋರುವ
ಹೊತ್ತು ಹೋಕರ ಮಾತೇತಕ್ಕೆ? ಕೈಯುಳಿಗತ್ತಿ
ಅಡಿಗೂಂಟಕ್ಕೆಡೆಯಾಗಬೇಡ,
ಅರಿ ನಿಜಾತ್ಮ ರಾಮರಾಮನ!"

ಮುಂಬರುವ ಬಸವಾದಿ ಪ್ರಮಥರ ತತ್ವಗಳಿಗೆ ಮುನ್ಸೂಚನೆ ಈ ವಚನಗಳಲ್ಲಿದೆ. ಎಂಥ ಮಹಾನುಭಾವ ಮಾದರ ಚೆನ್ನಣ್ಣ!

"ಚೆನ್ನನ ನಿಧಿ ಚೆನ್ನದ ಸುಧೆ ।
ಚೆನ್ನನ ಸಕಳಾಯು ಚೆನ್ನನಮೃತ ಸಮುದ್ರಂ ॥
ಚೆನ್ನನ ಸುತನೆಂದು ಹಂಪೆಯ ವಿರೂಪಾಕ್ಷ ॥"

ಎಂದು ಹರಿಹರನಂತೆ ನಾವೂ ಪ್ರಾರ್ಥಿಸೋಣ.

"ಅಂಬಲಿಯೊ ಅಮೃತವೊ ಶಂಭುಹರನೆಂಬಜಲವೊ
ಹಂಬಲಿಸಿ ಹರನು ಉಣ್ಣುವುದೊ ಶರಣನಿಗೆ
ನಂಬಿ ಶಿವಕೊಟ್ಟ ಶಿವಪದವೊ॥"





ಸ್ಥಾಪನೆ : 1954 ದೂರವಾಣಿ : 0816-2283456

# ಹಳೆಯ ವಿದ್ಯಾರ್ಥಿಗಳ ಹಾಗೂ ಹಿತೈಷಿಗಳ ಸಂಘ

**ಶ್ರೀ ಸಿದ್ಧಗಂಗಾ ಮಠ, ತುಮಕೂರು ಜಿಲ್ಲೆ- 572 104.**

## ಸರ್ವಸದಸ್ಯರ ಮಹಾಧಿವೇಶನದ ಆಹ್ವಾನ ಪತ್ರಿಕೆ

ನಮ್ಮ ಸಂಘದ **61ನೇ ವಾರ್ಷಿಕ ಮಹಾಧಿವೇಶನವನ್ನು ದಿನಾಂಕ 20-12-2015 ರಂದು ಭಾನುವಾರ ಬೆಳಿಗ್ಗೆ 10.00 ಗಂಟೆಗೆ** ಸರಿಯಾಗಿ ಶ್ರೀಮಠದ **'ಶ್ರೀ ಗೋಸಲ ಸಿದ್ಧೇಶ್ವರ ವೇದಿಕೆ'** ಯ ಮುಂಭಾಗದಲ್ಲಿ ನಮ್ಮ ಸಂಘದ ಸಂಸ್ಥಾಪಕರು ಹಾಗೂ ಪೂಜ್ಯ ಅಧ್ಯಕ್ಷರಾದ ಪದ್ಮಭೂಷಣ, ಕರ್ನಾಟಕರತ್ನ, ಬಸವಶ್ರೀ ಪುರಸ್ಕೃತ **ಪರಮಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ** ದಿವ್ಯಸಾನ್ನಿಧ್ಯದಲ್ಲಿ ಹಾಗೂ ಶ್ರೀ ಕ್ಷೇತ್ರದ ಅಧ್ಯಕ್ಷರಾದ **ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ** ಘನ ಉಪಸ್ಥಿತಿಯೊಂದಿಗೆ ಆಯೋಜಿಸಲಾಗಿದೆ. ತಾವು ಅಂದಿನ ಮಹಾಸಭೆಗೆ ತಮ್ಮ ಮಿತ್ರರುಗಳೊಂದಿಗೆ ತಪ್ಪದೇ ಆಗಮಿಸಿ ತಮ್ಮ ಅಮೂಲ್ಯವಾದ ಸಲಹೆಗಳನ್ನು ನೀಡಿ ಅಧಿವೇಶನವನ್ನು ಯಶಸ್ವಿಗೊಳಿಸಬೇಕೆಂದು ವಿನಂತಿಸಿಕೊಳ್ಳುತ್ತೇವೆ.

**: ಕಾರ್ಯಕ್ರಮ :**

1) ಶ್ರೀಮಠದ ನೈರ್ಮಲ್ಯ ಪ್ರಗತಿಯ ಬಗ್ಗೆ ಸಮಾಲೋಚಿಸುವುದು.
2) ಪರಮಪೂಜ್ಯ ಶ್ರೀ ಶ್ರೀಗಳವರ ಆದೇಶದ ಮೇರೆಗೆ ಕನ್ನಡ ಸಾರಸ್ವತ ಕ್ಷೇತ್ರದಲ್ಲಿ ಗಣನೀಯ ಸೇವೆಯನ್ನು ಸಲ್ಲಿಸಿದವರಿಗೆ **'ಸಿದ್ಧಗಂಗಾಶ್ರೀ'** ಪ್ರಶಸ್ತಿ
3) ಸಾಹಿತ್ಯ ಹಾಗೂ ಸಾಮಾಜಿಕ ಕ್ಷೇತ್ರದಲ್ಲಿ ಸೇವೆ ಸಲ್ಲಿಸಿದವರಿಗೆ **'ಸಿದ್ಧಗಂಗಾ ಶಿವಕುಮಾರಶ್ರೀ'** ಪ್ರಶಸ್ತಿ.
4) ಶ್ರೀಕ್ಷೇತ್ರ ಹಾಗೂ ಸಮಾಜದಲ್ಲಿ ಸೇವೆ ಸಲ್ಲಿಸಿದವರಿಗೆ **'ಸಂಘಸಿರಿ'** ಪ್ರಶಸ್ತಿಯನ್ನು ಪ್ರದಾನ ಮಾಡಲಾಗುವುದು. ಇನ್ನೂ ಅನೇಕ ವಿಷಯಗಳನ್ನು ಕುರಿತು ಚರ್ಚಿಸಲಾಗುವುದು.

**ಸಹೃದಯರೇ,**

ತಾವು ಸಂಘದ ಸದಸ್ಯರಾಗಿ ತುಂಬು ಹೃದಯದ ಸಹಕಾರ ನೀಡಿರುವುದನ್ನು ಕೃತಜ್ಞತಾಪೂರ್ವಕವಾಗಿ ಸ್ಮರಿಸಿಕೊಳ್ಳುತ್ತೇವೆ. ಸಂಘವು ಸ್ಥಾಪನೆಯಾದಾಗಿನಿಂದ ಅನೇಕ ಯೋಜನೆಗಳನ್ನು ಹಮ್ಮಿಕೊಂಡು ಕಾರ್ಯರೂಪಕ್ಕೆ ತರಲಾಗಿದೆ. ಈಗ ಪ್ರಮುಖವಾಗಿ ಶ್ರೀಮಠದ ನಿರಂತರ ನೀರು ಸರಬರಾಜು ಮತ್ತು ಪರಿಸರವನ್ನು ಸ್ವಚ್ಛಗೊಳಿಸುವ ಯೋಜನೆಯನ್ನು ಸಾಕಾರಗೊಳಿಸಬೇಕಿದೆ. ಈ ಕಾರ್ಯವನ್ನು ಹಳೆಯ ವಿದ್ಯಾರ್ಥಿಗಳ ಹಾಗೂ ಹಿತೈಷಿಗಳ ಸಂಘವು ನಿರ್ವಹಿಸಬೇಕೆಂದು ಸರ್ವ ಸದಸ್ಯರ ಸಭೆಯಲ್ಲಿ ನಿರ್ಣಯಿಸಲಾಗಿದೆ. ಈ ವಿಷಯವನ್ನು ತಮಗೆ ಪತ್ರಗಳ ಮೂಲಕ ನಿವೇದಿಸಿ ಕೊಳ್ಳಲಾಗಿದೆ. ಈ ಯೋಜನೆ ಯಶಸ್ವಿಯಾಗಲು ಕನಿಷ್ಠ 5 ಕೋಟಿ ರೂಗಳನ್ನಾದರು ಸಂಗ್ರಹಿಸಿ ಆ ನಿಧಿಯನ್ನು ನಿಶ್ಚಿತ ಠೇವಣಿಯಲ್ಲಿ ತೊಡಗಿಸಿ ಅದರಿಂದ ಬರುವ ಬಡ್ಡಿ ಹಣದಿಂದ ಈ ಯೋಜನೆಯನ್ನು ಪೂರ್ಣಗೊಳಿಸಬೇಕಿದೆ. ನಮ್ಮ ಮನವಿಗೆ ಸ್ಪಂದಿಸಿ ಹಳೆಯ ವಿದ್ಯಾರ್ಥಿಗಳು, ಹಿತೈಷಿಗಳು, ಸದ್ಭಕ್ತರು ಉದಾರವಾಗಿ ಧನಸಹಾಯ ಮಾಡುತ್ತಿದ್ದಾರೆ. ಇದುವರೆಗೆ 1 ಕೋಟಿ 60 ಲಕ್ಷ ರೂಗಳು ಸಂಗ್ರಹವಾಗಿದೆ. ಈ ಹಣದಿಂದ

ಬರುವ ಬಡ್ಡಿಯಿಂದ ಮೊದಲ ಆದ್ಯತೆಯಾಗಿ ಶ್ರೀಮಠದ ಆವರಣದಲ್ಲಿರುವ 4 ಶೌಚಾಲಯ ಮತ್ತು ಸ್ನಾನಗೃಹಗಳ ಸಂಕೀರ್ಣದ ಸ್ವಚ್ಛತಾ ಕಾರ್ಯವನ್ನು ಹೊರಗುತ್ತಿಗೆ ಆಧಾರದ ಮೇರೆಗೆ ವಹಿಸಲಾಗಿದೆ. ಅಂತೆಯೇ ಈ ಯೋಜನೆಯನ್ನು ವಿದ್ಯಾರ್ಥಿ ನಿಲಯಗಳ ಹಾಗೂ ಮಠದ ಆವರಣದ ಸ್ವಚ್ಛತೆಗೆ ವಿಸ್ತರಿಸಬೇಕಾಗಿದೆ. ತುರ್ತಾಗಿ ಹಣದ ಅವಶ್ಯಕತೆ ಬೇಕಾಗಿದೆ. ತಾವು ಮನಸ್ಸು ಮಾಡಿದರೆ ಉಳಿದ ಹಣ ಸಂಗ್ರಹಣೆ ಕಷ್ಟಕರವೇನಲ್ಲ.

ಕಳೆದ ಮಹಾಧಿವೇಶನದಲ್ಲಿ ತೆಗೆದುಕೊಂಡ ನಿರ್ಣಯದಂತೆ ಎಲ್ಲಾ ಸದಸ್ಯರು ವರ್ಷಂಪ್ರತಿ ಕನಿಷ್ಠ **1000/-** ರೂಗಳಿಗೆ ಕಡಿಮೆ ಇಲ್ಲದಂತೆ ದೇಣಿಗೆ ನೀಡಿದರೆ ಈ ಯೋಜನೆ ಫಲಕಾರಿಯಾಗುತ್ತದೆ. ತಾವು ಕಾಯಾ-ವಾಚಾ-ಮನಸಾ ಈ ಯೋಜನೆಗೆ ಕೈಜೋಡಿಸುತ್ತೀರೆಂದು ವಿನಂತಿಸಿಕೊಳ್ಳುತ್ತೇವೆ. ಮತ್ತೊಂದು ಅಂಶವನ್ನು ತಮ್ಮ ಆದ್ಯ ಗಮನಕ್ಕೆ ತರಬಯಸುವುದೇನೆಂದರೆ ಪ್ರತಿಯೊಬ್ಬ ಸದಸ್ಯರು ದಿನಕ್ಕೆ **1/- ರೂ.** ನಂತೆ ಉಳಿಸಿ ತಮ್ಮ ವಯಸ್ಸಿಗನುಗುಣವಾಗಿ ಲೆಕ್ಕಹಾಕಿ ದೇಣಿಗೆ ನೀಡಿದರೆ ಅತ್ಯಲ್ಪ ಅವಧಿಯಲ್ಲಿ ಯೋಜನೆಯ ಗುರಿ ಮುಟ್ಟಬಹುದು. ಇದನ್ನು ಸಾಕಾರಗೊಳಿಸಬೇಕಾದವರೂ ನೀವೇ ಎಂಬ ಅಂಶವನ್ನು ತಮ್ಮಲ್ಲಿ ಅರಿಕೆಮಾಡಿ ಕೊಳ್ಳುತ್ತೇವೆ. ತಾವು ನೀಡುವ ದೇಣಿಗೆಯನ್ನು **'ಸಿದ್ಧಗಂಗಾ ಗುರುಕುಲ ಡೆವಲಪ್‌ಮೆಂಟ್ ಟ್ರಸ್ಟ್'** ಹೆಸರಿಗೆ **ಚೆಕ್/ಡಿ.ಡಿ./ನಗದು** ರೂಪದಲ್ಲಿ ನೀಡಬಹುದು. ತಾವು ನೀಡುವ ಹಣಕ್ಕೆ ಆದಾಯ ತೆರಿಗೆ ಇಲಾಖೆಯಿಂದ **80ಜಿ** ಅಡಿಯಲ್ಲಿ **ಶೇ. 50** ರವರೆಗೂ **ತೆರಿಗೆ ವಿನಾಯಿತಿ** ಇರುತ್ತದೆ. ಅಂತೆಯೇ 10 ಸಾವಿರಕ್ಕೂ ಮೇಲ್ಪಟ್ಟು ವಂತಿಗೆ ನೀಡುವ ದಾನಿಗಳ ಹೆಸರನ್ನು ಶ್ರೀಮಠದ ಆವರಣದಲ್ಲಿ ಹಾಕಲಾಗುವುದು. ಈ ಅವಕಾಶವನ್ನು ಸದುಪಯೋಗಪಡಿಸಿಕೊಳ್ಳುತ್ತೀರೆಂದು ಆಶಿಸುತ್ತೇವೆ. ತಮ್ಮೆಲ್ಲರನ್ನೂ **20-12-2015ರಂದು ಭಾನುವಾರ** ನಡೆಯುವ ಮಹಾಧಿವೇಶನಕ್ಕೆ ಆತ್ಮೀಯವಾಗಿ ಆಹ್ವಾನಿಸುತ್ತೇವೆ.

**ತಮ್ಮ ಆಗಮನಾಕಾಂಕ್ಷಿಗಳು**

**ಕೆ.ಹೆಚ್. ಶಿವರುದ್ರಯ್ಯ**
**ಕಾರ್ಯದರ್ಶಿ**

**ಡಾ|| ಎಂ.ಎನ್. ಚನ್ನಬಸಪ್ಪ**
**ಪ್ರಧಾನ ಕಾರ್ಯದರ್ಶಿ**

## ಶ್ರದ್ಧಾಂಜಲಿ

ಶ್ರೀಮಠದ ಅನನ್ಯ ಭಕ್ತರೂ, ಸಿದ್ಧಗಂಗಾ ಪತ್ರಿಕೆ ಪ್ರಕಟಣಕ್ಕೆ ಕಾರಣರೂ, ಶ್ರೀ ಸಿದ್ಧಲಿಂಗೇಶ್ವರ ವಸ್ತುಪ್ರದರ್ಶನದ ಕಾರ್ಯದರ್ಶಿಗಳಾಗಿ ಸೇವೆ ಸಲ್ಲಿಸಿದವರೂ, ಹಳೆಯ ವಿದ್ಯಾರ್ಥಿಗಳ ಹಾಗೂ ಹಿತೈಷಿಗಳ ಸಂಘದ ಸದಸ್ಯರೂ, ಆಡಿಟರ್ ವೃತ್ತಿನಿರತರೂ, ದೊಡ್ಡಬಳ್ಳಾಪುರ ತಾಲ್ಲೂಕು ಅಂಬಲಗೆರೆ ಗ್ರಾಮದ ಸದ್ಭಕ್ತ ದಂಪತಿಗಳಾದ ಶ್ರೀ ಶ್ಯಾಮಯ್ಯ ಮತ್ತು ಶ್ರೀಮತಿ ಗಂಗಮ್ಮನವರ ಸುಪುತ್ರರೂ ಆದ ಶ್ರೀ ಎಸ್. ಸಿದ್ಧಗಂಗಯ್ಯನವರು ದಿನಾಂಕ 13-11-2015ರಂದು ಲಿಂಗೈಕ್ಯರಾದುದನ್ನು ತಿಳಿದು 'ಸಿದ್ಧಗಂಗಾ'ಕ್ಕೆ ಅತೀವ ದುಃಖವಾಯಿತು.

ಶ್ರೀಯುತರ ಅಗಲಿಕೆಯಿಂದ ದುಃಖಸಾಗರದಲ್ಲಿರುವ ಕುಟುಂಬ ವರ್ಗದವರಿಗೆ ಶ್ರೀ ಸಿದ್ಧಗಂಗಾ ಗುರುಪರಂಪರೆ ನೋವನ್ನು ಸಹಿಸುವ ಶಕ್ತಿಯನ್ನು ನೀಡಲಿ ಎಂದು ಪ್ರಾರ್ಥಿಸುತ್ತ, ಲಿಂಗೈಕ್ಯ ಶ್ರೀ ಸಿದ್ಧಗಂಗಯ್ಯನವರ ಆತ್ಮಕ್ಕೆ ಚಿರಶಾಂತಿಯನ್ನು ಅನುಗ್ರಹಿಸಲಿ ಎಂದು 'ಸಿದ್ಧಗಂಗಾ' ಕೋರುತ್ತದೆ.





# ಮೋಕ್ಷ ನಿರ್ವಾಣ ಮತ್ತು ಲಿಂಗಾಂಗ ಸಾಮರಸ್ಯ

– ಬಾಲಚಂದ್ರ ಜಯಶೆಟ್ಟಿ*

ಬ್ರಹ್ಮತತ್ತ್ವವು ಅನಿರ್ವಚನೀಯ ಮತ್ತು ನಿರ್ಗುಣ ಇಲ್ಲವಾದ್ದರಿಂದ ಅದು ಕೆಲವು ವಿಶಿಷ್ಟವಾದ ಗುಣಗಳನ್ನು ಹೊಂದಿರುತ್ತದೆ. ಆದ್ದರಿಂದಲೇ ಜೀವದ ಅಹಂಭಾವ ಅಥವಾ ಪಾರ್ಥಕ್ಯವು ನಷ್ಟವಾಗದೆಯೂ ಬ್ರಹ್ಮನಿಗೆ ಪ್ರಾಪ್ತವಾಗುವ ಎಲ್ಲ ಭೋಗಗಳನ್ನು ಅದು ಭೋಗಿಸುತ್ತದೆ. ಜೀವ ಮತ್ತು ಬ್ರಹ್ಮದ ಭೇದವು ಅವಿದ್ಯೆಯ ಕಾರಣ ದಿಂದಾಗಿಯಲ್ಲ ಅದು ವಾಸ್ತವವಾಗಿದೆ. ಈ ಭೇದವು ಮೋಕ್ಷಾವಸ್ಥೆಯಲ್ಲಿಯೂ ಯಥಾವತ್ತಾಗಿರುತ್ತದೆ. ರಾಮಾನುಜಾಚಾರ್ಯರ ಪ್ರಕಾರ ಮೋಕ್ಷದ ಎರಡು ಸಾಧನಗಳಿವೆ-ಭಕ್ತಿ ಮತ್ತು ಪ್ರಪತ್ತಿ. ವೈದಿಕ ಕರ್ಮ, ದೇವತಾರ್ಚನೆ, ತೀರ್ಥಯಾತ್ರೆ, ಉಪವಾಸ ಮುಂತಾದವು ಗಳನ್ನು ನಿಷ್ಕಾಮ ಭಾವನೆಯಿಂದ ಮಾಡುವುದು ಕರ್ಮಯೋಗ ಅನಿಸುತ್ತದೆ. ಕರ್ಮಯೋಗದ ಮೂಲಕ ಚಿತ್ತದ ಎಲ್ಲ ಮಾಲಿನ್ಯವು ತೊಳೆದು ಹೋಗುತ್ತದೆ ಮತ್ತು ಜ್ಞಾನಯೋಗವು ಪ್ರಾಪ್ತವಾಗುತ್ತದೆ. ಜ್ಞಾನಯೋಗದಿಂದ ಜೀವನಲ್ಲಿ – ತಾನು ಜಡ ದೇಹದಿಂದ ಭಿನ್ನವಾಗಿದ್ದೇನೆ ಮತ್ತು ಪರಮಾತ್ಮನ ದೇಹಕ್ಕೆ ಸಮನಾಗಿದ್ದೇನೆ. ನಾನು ಆತನನ್ನೇ ಅವಲಂಬಿಸಿ ದ್ದೇನೆ. ಆತನ ಸೇವಕನಾಗಿದ್ದೇನೆ ಎಂಬ ಭಾವನೆ ಸ್ಥಿರವಾಗುತ್ತದೆ. ಈ ರೀತಿಯ ಭಾವನೆಯು ಸ್ಥಿರವಾಗುವು ದರಿಂದ ಭಕ್ತಿಯು ಸೃಜನವಾಗುತ್ತದೆ. ಭಕ್ತಿಯಿಂದ ಸಂತುಷ್ಟನಾಗಿ ಪರಮಾತ್ಮನು ಮೋಕ್ಷವನ್ನು ದಯ ಪಾಲಿಸುತ್ತಾನೆ. ಮೋಕ್ಷದ ಅರ್ಥ ಪರಮಾತ್ಮ ನೊಂದಿಗೆ ಪರಮ ಸಾಮ್ಯವನ್ನು ಹೊಂದುವುದೇ ಆಗಿದೆ. ಪರಮಾತ್ಮ ನಲ್ಲಿ ಐಕ್ಯವಾಗುವುದಲ್ಲ.

ಭಕ್ತಿಗಿಂತಲೂ ಪ್ರಪತ್ತಿಯು ಉತ್ಕಟವಾಗಿರುತ್ತದೆ. ಅನನ್ಯ ಭಾವದಿಂದ ನಿಸ್ಸಂದೇಹವಾದ ಮನಸ್ಸಿನಿಂದ ಸಂಪೂರ್ಣ ವಾಗಿ ಪರಮಾತ್ಮನಿಗೆ ಶರಣು ಹೋಗುವುದು. ಆತನಿಗೆ ಇಷ್ಟವಾದುದನ್ನೇ ಕಾಮಿಸುವುದು, ಪರಮಾತ್ಮನು ಯಾವ ವಿಷಯಗಳ ಬಗ್ಗೆ ಪ್ರತಿಕೂಲನಾಗಿರುವನೋ ಅಂಥ ವಿಷಯ ಗಳ ಕುರಿತು ಕನಸಿನಲ್ಲಿಯೂ ಯೋಚಿಸದೇ ಇರುವುದು. ಆತನ ಆಶ್ರಯವನ್ನೇ ಸ್ವೀಕರಿಸುವುದು ಮತ್ತು ತನ್ನನ್ನು ಹತ್ತಿರಕ್ಕೆ ಕರೆದುಕೊ ಎಂದು ಆತನಲ್ಲಿ ಯಾಚಿಸುವುದು– ಇವು ಪ್ರಪತ್ತಿಯ ಐದು ಅಂಗಗಳೆಂದು ಹೇಳಲಾಗಿದೆ.

ದ್ವೈತಮತದ ಸಂಸ್ಥಾಪಕರಾದ ಮಧ್ವಾಚಾರ್ಯರು ಕೇವಲ ಎರಡೇ ತತ್ತ್ವಗಳನ್ನು ಪ್ರತಿಪಾದಿಸಿದ್ದಾರೆ–ಒಂದು ಸ್ವತಂತ್ರ ತತ್ತ್ವ ಮತ್ತು ಇನ್ನೊಂದು ಅಸ್ವತಂತ್ರ ತತ್ತ್ವ. ಭಗವಂತನಾದ ವಿಷ್ಣುವು ಸ್ವತಂತ್ರ ತತ್ತ್ವವಾಗಿದ್ದು ಆತನನ್ನೇ ಬ್ರಹ್ಮ ಎಂದು ಕರೆಯಲಾಗುತ್ತದೆ. ಅಣು ಸ್ವರೂಪಿಯಾದ ಜೀವಗಳು ಪರಸ್ಪರ ಭಿನ್ನವಾಗಿವೆ ಮತ್ತು ಅವುಗಳು ಸ್ವತಂತ್ರ ಸತ್ತೆಯಾದ ವಿಷ್ಣುವಿನಿಂದಲೂ ಭಿನ್ನವಾಗಿವೆ. ಪ್ರಪಂಚದ ಸಮಸ್ತ ಜಡವಸ್ತುಗಳೂ ಕೂಡ ಪರಸ್ಪರವಾಗಿಯೂ, ಜೀವ ಪದಾರ್ಥಗಳಿಂದಲೂ ಮತ್ತು ಪರಮ ತತ್ತ್ವದಿಂದಲೂ ಭಿನ್ನವಾಗಿವೆ. ಈ ಭಿನ್ನತೆಯ ದೃಷ್ಟಿಕೋನದಿಂದಾಗಿಯೇ ಮಧ್ವಾಚಾರ್ಯರ ಸಿದ್ಧಾಂತಕ್ಕೆ ದ್ವೈತಮತ ಎಂದು ಕರೆಯಲಾಗಿದೆ.

ಅದ್ವೈತದ 'ಜಗನ್ಮಿಥ್ಯಾ' ಎಂಬ ವಾದವನ್ನು ಮಧ್ವಾಚಾರ್ಯರು ಖಂಡಿಸುತ್ತಾರೆ. ಯಾಕೆಂದರೆ, ಈ ಮಿಥ್ಯಾವಾದವು ಶ್ರುತಿಗಳ ಆಧಾರವನ್ನು ಹೊಂದಿಲ್ಲ. ಅದು ಅನುಮಾನವನ್ನು ಅವಲಂಬಿಸಿದೆ. ಒಂದು ವೇಳೆ ಜಗತ್ತನ್ನು ಮಿಥ್ಯೆ ಅಥವಾ ಭ್ರಮೆ ಎಂದು ಭಾವಿಸುವು ದಾದರೆ ಆ ಭ್ರಮೆ ಯಾರಿಗುಂಟಾಗುತ್ತದೆ ಎಂಬ ಪ್ರಶ್ನೆ ಎದುರಾಗುತ್ತದೆ. ಅದ್ವೈತದ ಅನುಸಾರವಾಗಿ ಏಕಮಾತ್ರ ಸತ್ಯವಾಗಿರುವ ಬ್ರಹ್ಮನಿಗೆ ಮಾತ್ರ ಜಗತ್ತು ಭ್ರಾಮಕವಾಗಿ ಕಾಣಬೇಕು. ಬ್ರಹ್ಮವು ಜ್ಞಾನಿಯಾಗಿರುವುದರಿಂದ ಆತನಿಗೆ ಭ್ರಮೆಯುಂಟಾಗುವುದು ಸಾಧ್ಯವಿಲ್ಲ. ಬ್ರಹ್ಮನ ಮೇಲೆ ಜಗತ್ತಿನ ಅಧ್ಯಾಸವಾಗುತ್ತದೆ. ಆರೋಪಿತವಾಗುತ್ತದೆ ಎಂದು ಅದ್ವೈತದಲ್ಲಿ ಹೇಳಿದೆ. ಯಾವುದೇ ಒಂದು

* 'ಸಮ್ಮ ಮನೆ', ಜಯನಗರ, ಸೇಡಂ ರಸ್ತೆ, ಕಲಬುರಗಿ–೫೮೫ ೧೦೫. ಮೊ : 9945215054

ಸತ್ಯ ವಸ್ತುವಿನಿಂದ ಪರಿಚಿತವಾದಾಗ ಮಾತ್ರವೇ ನಾವು ಇನ್ನೊಂದು ವಸ್ತುವಿನ ಮೇಲೆ ಅದನ್ನು ಆರೋಪಿಸಲು ಸಾಧ್ಯ. ನಿಜವಾದ ಹಾವಿನಿಂದ ಪರಿಚಿತವಾದ ಮೇಲೆಯೇ ಹಗ್ಗದಲ್ಲಿ ಹಾವಿನ ಭ್ರಮೆ ಉಂಟಾಗಲು ಸಾಧ್ಯ. ನಿಜವಾದ ಬೆಳ್ಳಿಯಿಂದ ಪರಿಚಿತರಾಗಿದ್ದರೇನೆ ಸಿಂಪಿಯಲ್ಲಿ ಬೆಳ್ಳಿಯ ಭ್ರಮೆಯುಂಟಾಗುತ್ತದೆ. ಇದೇ ರೀತಿಯಾಗಿ ಬ್ರಹ್ಮನ ಮೇಲೆ ಜಗತ್ತನ್ನು ಆರೋಪಿಸಬೇಕಾದರೆ ಸತ್ಯ ಜಗತ್ತಿನ ಅಸ್ತಿತ್ವ ಇರಲೇ ಬೇಕಾಗುತ್ತದೆ. ಈ ತರ್ಕದಂತೆ ಮಧ್ವಾ ಚಾರ್ಯರು ಜಗತ್ತು ಮಿಥ್ಯೆ ಅಥವಾ ಭ್ರಮೆಯಾಗಿರದೆ ಅದೂ ಕೂಡ ಸತ್ಯವಾಗಿದೆ ಎಂದು ಸಮರ್ಥಿಸುತ್ತಾರೆ.

ದ್ವೈತಮತಕ್ಕೆ ಸಂಬಂಧಪಟ್ಟಂಥ ಈ ದೃಷ್ಟಿಕೋನದ ಸಂಕ್ಷಿಪ್ತವಾದ ಪರಿಚಯ ಪಡೆದ ಮೇಲೆ ಈಗ ಈ ಮತದ ಮೋಕ್ಷ ಎಂದರೆ ಏನು ಮತ್ತು ಮೋಕ್ಷದ ಸ್ವರೂಪ ಏನು ಎಂಬುದನ್ನು ನಾವು ನೋಡುವ ದ್ವೈತಮತದ ಅನುಸಾರವಾಗಿ ಮೋಕ್ಷವು ಪರಮಾತ್ಮನ ಪ್ರಸಾದದಿಂದ ಪ್ರಾಪ್ತವಾಗುತ್ತದೆ ಮತ್ತು ಪರಮಾತ್ಮನ ಪ್ರಸಾದವು ಪರಮಾತ್ಮನ ಸೇವೆಯಿಂದ ಲಭಿಸುತ್ತದೆ. ಈ ಸೇವೆ ಮೂರು ಬಗೆಯದಾಗಿರುತ್ತದೆ – **1. ಅಂಕನ:** ಭಗವಂತನಾದ ವಿಷ್ಣುವಿನ ಶಂಖ, ಚಕ್ರ ಮುಂತಾದ ಆಯುಧಗಳ ಚಿಹ್ನೆಗಳನ್ನು ಕಾದ ಧಾತುವಿನ ಮುದ್ರೆಗಳಿಂದ ಅಂಗಾಂಗಗಳಲ್ಲಿ ಮುದ್ರೆಗಳನ್ನು ಹಾಕಿ ಕೊಳ್ಳುವುದು. **2. ನಾಮಕರಣ :** ಅಂದರೆ ಮಕ್ಕಳಿಗೆ ನಾರಾಯಣ, ಕೇಶವ ಮುಂತಾಗಿ ಭಗವಂತನ ಹೆಸರುಗಳನ್ನೇ ಇಡುವುದು. ಅಂದರೆ ಮಕ್ಕಳ ಹೆಸರು ಹೇಳುವ ನೆಪದಿಂದ ಸದಾ ಭಗವಂತನ ನಾಮಸ್ಮರಣೆ ಯಾಗುತ್ತಿರುತ್ತದೆ. ಮತ್ತು **3. ಭಜನ :** ಇದು ಸೇವೆಯ ಮೂರನೆಯ ಪ್ರಕಾರವಾಗಿದೆ. ಸತ್ಯವಾದುದನ್ನು, ಹಿತವಾದುದನ್ನು ಮತ್ತು ಪ್ರಿಯವಾದುದನ್ನು ನುಡಿಯುವುದು ಹಾಗೂ ಸ್ವಾಧ್ಯಾಯ ಪಠಣ ಮಾಡು ವುದು–ಇವು ನಾಲ್ಕು ವಾಣಿಯ ಮೂಲಕ ಮಾಡುವ ಭಜನೆಗಳಾಗಿವೆ. ದಾನ ಮಾಡುವುದು, ವಿಪತ್ತಿಗೊಳ ಗಾದವರ ಸಂಕಟವನ್ನು ನಿವಾರಿಸುವುದು, ಅನಾಥರನ್ನು ರಕ್ಷಿಸುವುದು–ಇವು ಮೂರು ದೇಹದಿಂದ ಮಾಡುವ ಭಜನೆಗಳಾಗಿವೆ. ದಯೆ, ಸತ್ಕರ್ಮದ ಇಚ್ಛೆ ಮತ್ತು ದ್ವೈತ ವೇದಾಂತಮತದ ಬಗ್ಗೆ ಶ್ರದ್ಧೆ–ಇವು ಮೂರು ಮನಸ್ಸಿನಿಂದ ಮಾಡುವ ಭಜನೆಗಳಾಗಿವೆ. ಈ ರೀತಿಯಾಗಿ ಭಜನೆಯ ಒಟ್ಟು ಹತ್ತು ಬಗೆಗಳನ್ನು ಹೇಳಲಾಗಿದೆ. ವಿಷ್ಣು ಭಕ್ತಿಪೂರ್ವಕವಾಗಿ ಈ ಮೂರು ಸೇವೆಗಳನ್ನು ಮಾಡುವುದರಿಂದ ಹೃದಯದಲ್ಲಿ ಸ್ಥಿತ ನಾಗಿರುವ ಪರಮಾತ್ಮನ ಸಾಕ್ಷಾತ್ ಜ್ಞಾನವು ಪ್ರಾಪ್ತವಾಗುತ್ತದೆ ಮತ್ತು ದೇಹಾವಸಾನದ ನಂತರ ಜೀವಕ್ಕೆ ಮೋಕ್ಷ ದೊರೆಯುತ್ತದೆ.

ದ್ವೈತ ಮತದ ಪ್ರಕಾರ ಮೋಕ್ಷವು ನಿತ್ಯವಾಗಿದೆ. ಮೋಕ್ಷದ ಕಾಲಕ್ಕೆ ಕರ್ಮಗಳಿಂದ ಪ್ರಾಪ್ತವಾದ ಪ್ರಾಕೃತಿಕ ಶರೀರವು ಅವಸಾನಗೊಳ್ಳುತ್ತದೆ. ಜೀವವು ತನ್ನ ಅಣು ರೂಪದ ಅವಸ್ಥೆಯಲ್ಲಿ ಉಳಿದುಕೊಳ್ಳುತ್ತದೆ. ಮೋಕ್ಷದ ಸ್ಥಿತಿಯು ತುಂಬಾ ಸುಖದಾಯಕವಾಗಿರುತ್ತದೆ. ಈ ಸುಖವು ಹೊರಗಿನಿಂದ ಪ್ರಾಪ್ತವಾಗುವುದಿಲ್ಲ; ಅದು ಆತ್ಮದ ಸುಖವೇ ಆಗಿರುತ್ತದೆ. ವಾಸ್ತವವಾಗಿ ಸುಖವು ಆತ್ಮದ ಸ್ವರೂಪ ಅಥವಾ ಸ್ವಭಾವವಾಗಿರುತ್ತದೆ. ಭಗವಂತನ ಕೃಪೆಯಿಂದಾಗಿ ಆತ್ಮಜ್ಞಾನ ಉಂಟಾಗುತ್ತದೆ ಮತ್ತು ಮೋಕ್ಷ ದೊರೆಕೊಳ್ಳುತ್ತದೆ. ಮೋಕ್ಷಾವಸ್ಥೆಯಲ್ಲಿ ವೈಕುಂಠ ಲೋಕದಲ್ಲಿ ಪರಮಾತ್ಮನ ಸಾನಿಧ್ಯ ಪ್ರಾಪ್ತವಾಗುತ್ತದೆ. ಈ ಅವಸ್ಥೆಯಲ್ಲಿಯೂ ಕೂಡ ಜೀವವು ಪರಮಾತ್ಮ ನಿಂದಲೂ ಮತ್ತು ಇತರ ಎಲ್ಲ ಮುಕ್ತ ಜೀವಿಗಳಿಂದಲೂ ಭಿನ್ನವಾಗಿಯೇ ಇರುತ್ತದೆ. ಪ್ರತಿಯೊಂದು ಮುಕ್ತ ಜೀವವು ಪೂರ್ಣ ಕಾಮವಾಗಿರುತ್ತದೆ. ಪಾಪಕರ್ಮಗಳಿಂದಾಗಿ ಜೀವವು ನರಕಕ್ಕೆ ಹೋಗಬೇಕಾಗಿ ಬಂದಲ್ಲಿ ಅದಕ್ಕೆ ಅಲ್ಲಿ ನಿತ್ಯವೂ ನರಕವಾಸವನ್ನು ಭೋಗಿಸಬೇಕಾಗುತ್ತದೆ –ಇದು ದ್ವೈತಮತದ ಮಂತವ್ಯವಾಗಿದೆ. ಆದರೆ ಇತರ ಭಾರತೀಯ ದರ್ಶನಗಳ ಪ್ರಕಾರ ನರಕವಾಸದಲ್ಲಿ ಜೀವವು ತನ್ನ ಕರ್ಮಗಳನ್ನು ಭೋಗಿಸಿದ ನಂತರ ತನ್ನನ್ನು ತಾನು ಉದ್ಧರಿಸಿಕೊಳ್ಳಲು ಸ್ವತಂತ್ರವಾಗುತ್ತದೆ. ಇದನ್ನು ದ್ವೈತ ಮತವು ಒಪ್ಪುವುದಿಲ್ಲ.

ಶಂಕರಾಚಾರ್ಯರ ಮತವು ಕೇವಲಾದ್ವೈತ ಎನಿಸುವುದಾದರೆ ವಲ್ಲಭಾಚಾರ್ಯರ ಮತವು ಶುದ್ಧಾದ್ವೈತ ಎಂದೆನಿಸುತ್ತದೆ. ಮಾಯೆಯ ನೆರವು ಪಡೆದು ಕೇವಲಾ ದ್ವೈತದಲ್ಲಿ ಜಗತ್ತನ್ನು ಮಿಥ್ಯೆ ಎಂದು ಹೇಳಲಾಯಿತು. ವಲ್ಲಭಾಚಾರ್ಯರಿಗೆ ಈ ಮಾಯಾವಾದ ಮತ್ತು ಮಿಥ್ಯಾವಾದಗಳು ಒಪ್ಪಿಗೆಯಿಲ್ಲ. ಮಾಯೆಯ ಸಂಬಂಧದಿಂದ ರಹಿತವಾಗಿರುವುದೇ





ಶುದ್ಧವಾಗಿದೆ. ಬ್ರಹ್ಮವೇ ಜಗತ್ತಿಗೆ ಏಕಮಾತ್ರ ಕಾರಣವಾಗಿದೆ ಮತ್ತು ಜಗತ್ತು ಅದರ ವಾಸ್ತವಿಕವಾದ ಪರಿಣಾಮವಾಗಿದೆ; ವಿವರ್ತವಲ್ಲ. ಬ್ರಹ್ಮವು ಕಾರಣ ಸ್ವರೂಪವಾಗಿದ್ದರೆ ಜಗತ್ತು ಅದರ ಕಾರ್ಯ ರೂಪವಾಗಿದೆ. ಇವೆರಡರ ಐಕ್ಯವನ್ನು ತೋರಿಸುವುದಕ್ಕಾಗಿ ಮಾಯೆಯ ಅವಶ್ಯಕತೆಯಿಲ್ಲ. ಅಂದರೆ ಬ್ರಹ್ಮವು ಮಾಯೆ ಯಿಂದ ಶಬಲಿತವಾಗುವುದಿಲ್ಲ. ಆದ್ದರಿಂದ ಈ ಮತವು ಶುದ್ಧಾದ್ವೈತವಾಗಿದೆ. ಅದ್ವೈತವು ಹೇಳುವ ಹಾಗೆ ಜೀವ ಮತ್ತು ಜಗತ್ತು ಇವು ಬ್ರಹ್ಮನ ವಿಕೃತ ರೂಪಗಳಲ್ಲ. ಆದರೆ, ಅವಿಕೃತ ಪರಿಣಾಮಗಳಾಗಿವೆ. ಹಾಲಿನಿಂದ ಮೊಸರಾಗುವುದು ವಿಕೃತ ಪರಿಣಾಮವಿದೆ. ಆದರೆ ಚಿನ್ನದಿಂದ ಬೇರೆ ಬೇರೆ ಒಡವೆಗಳಾಗುವುದು ವಿಕೃತವಲ್ಲ. ಅದು ಅವಿಕೃತ ಪರಿಣಾಮ ವಾಗುತ್ತದೆ. ಯಾಕೆಂದರೆ ವಿಭಿನ್ನ ಒಡವೆಗಳಲ್ಲಿ ಇರುವ ಚಿನ್ನದ ಚಿನ್ನತ್ವದಲ್ಲಿ ಯಾವುದೇ ವಿಕಾರ ಉಂಟಾಗುವುದಿಲ್ಲ.

ವಲ್ಲಭಾಚಾರ್ಯರ ಪ್ರಕಾರ ಬ್ರಹ್ಮವು ಸತ್–ಚಿತ್–ಆನಂದ ಸ್ವರೂಪವಾಗಿರುತ್ತದೆ. ಬ್ರಹ್ಮದ ಈ ಸಚ್ಚಿದಾನಂದ ಸ್ವರೂಪದಲ್ಲಿ ಆನಂದದ ತಿರೋಭಾವವಾದಾಗ ಮತ್ತು ಕೇವಲ ಸತ್ ಮತ್ತು ಚಿತ್ ಇವು ಎರಡೇ ಉಳಿದಾಗ ಅದು ಜೀವ ಎನಿಸುತ್ತದೆ ಮತ್ತು ಆನಂದದ ಅಭಾವದಿಂದಾಗಿ ಅದು ದುಃಖವನ್ನು ಅನುಭವಿಸುತ್ತದೆ. ಆನಂದ ಮತ್ತು ಚಿತ್ ಈ ಎರಡೂ ಅಂಶಗಳ ತಿರೋಭಾವವಾಗಿ ಬರೀ ಸತ್ ಮಾತ್ರ ಉಳಿದುಕೊಂಡಾಗ ಅದು ಜಗತ್ ಎನಿಸುತ್ತದೆ.

ಜೀವದ ಅಹಂತ್ವ ಮತ್ತು ಮಮತ್ವದಿಂದಾಗಿ ಆನಂದದ ತಿರೋಭಾವವಾಗುತ್ತದೆ. ಅಹಂತ್ವ ಮತ್ತು ಮಮತ್ವಕ್ಕೆ ಕಾರಣ ಅವಿದ್ಯೆಯಾಗಿದೆ. ಅವಿದ್ಯೆಯನ್ನು ನಷ್ಟಗೊಳಿಸಿದಾಗ ಅಹಂತ್ವ ಮತ್ತು ಮಮತ್ವಗಳ ನಿರಸನವಾಗಿ ಜೀವಕ್ಕೆ ಸಹಜವಾಗಿ ಆನಂದವು ಪ್ರಾಪ್ತವಾಗುತ್ತದೆ. ಆನಂದವೇ ಮೋಕ್ಷವಾಗಿದೆ. ಇಲ್ಲಿ ಏಳುವ ಪ್ರಶ್ನೆಯೆಂದರೆ ಈ ಅವಿದ್ಯೆಯ ನಿರ್ಮಾಣ ವಾದರೂ ಏಕಾಗುತ್ತದೆ? ಜೀವದ ಬಂಧನವೇಕಾಗುತ್ತದೆ? ಅದರ ಆನಂದದ ಅಂಶವು ಏಕೆ ತಾನೆ ತಿರೋಭಾವ ಗೊಳ್ಳುತ್ತದೆ? ಈ ಎಲ್ಲ ಪ್ರಶ್ನೆಗಳಿಗೆ ಒಂದೇ ಉತ್ತರವಿದೆ. ಅದೆಂದರೆ 'ಭಗವಂತನ ಲೀಲೆ'. ನಮಗೆ ಭಗವಂತನ ಲೀಲೆಯು ಅರಿವಾದಾಗ ಭಗವಂತನ ಆನಂದ ಸ್ವರೂಪದಲ್ಲಿ ನಮ್ಮ ಪ್ರವೇಶವಾಗುತ್ತದೆ. ನಾವು ಭಗವಂತನೊಡನೆ ಏಕರೂಪ ವಾಗುತ್ತೇವೆ. ಈ ಅವಸ್ಥೆಗೆ 'ಸಾಯುಜ್ಯ–ಮುಕ್ತಿ' ಎಂದು ಕರೆಯಲಾಗುತ್ತದೆ. ಈ ಅವಸ್ಥೆಯನ್ನು ಹೊಂದುವ ಉಪಾಯವೆಂದರೆ ಭಗವದ್ಭಕ್ತಿ. ಕಾಯಾ ವಾಚ ಮನಸಾ ಭಗವಂತನಿಗೆ ಶರಣು ಹೋಗುವುದು; ನನ್ನದೆಂಬುದು ಏನೂ ಇಲ್ಲ ಎಂಬಂಥ ಅನುಭೂತಿ ಹೊಂದುವುದು. ಭಗವಂತನಿಗೆ ಅನನ್ಯವಾಗಿ ಪ್ರೀತಿಸುವುದು ಭಕ್ತಿಯಾಗಿದೆ.

ನಿಂಬಾರ್ಕಾಚಾರ್ಯರು ದ್ವೈತಾದ್ವೈತ ಮತ ಅಥವಾ ಭೇದಾಭೇದ ವಾದವನ್ನು ಮಂಡಿಸಿದರು. ಚೇತನ ಬ್ರಹ್ಮ ವನ್ನು ಅವರು ಜಗತ್ತಿನ ಉಪಾದಾನ ಕಾರಣವೆಂದು ಬಗೆದರಲ್ಲದೆ ಅದನ್ನು ನಿಮಿತ್ತ ಕಾರಣವೆಂದೂ ಬಗೆದರು. 'ನಾನು ಒಂಟಿಯಾಗಿದ್ದೇನೆ– ಅನೇಕವಾಗ ಬಯಸುತ್ತೇನೆ' –ಬ್ರಹ್ಮನ ಈ ಕಾಮನೆಯಿಂದಾಗಿಯೇ ಜಗತ್ತಿನ ನಿರ್ಮಾಣ ವಾಯಿತು. ಆದ್ದರಿಂದ ಬ್ರಹ್ಮವು ಉಪಾದಾನ ಕಾರಣ ವಾಗುತ್ತದೆ. ಶ್ರುತಿಗಳ ಕಥನದಂತೆ ಬ್ರಹ್ಮನು ಜಗತ್ತನ್ನು ನಿರ್ಮಿಸಿದನು; ಆದ್ದರಿಂದ ಆತ ನಿಮಿತ್ತ ಕಾರಣ ವಾಗಿದ್ದಾನೆ. ಬ್ರಹ್ಮನು ಜಗತ್ತಿನ ಕಾರಣವಾಗಿದ್ದಾನೆ ಮತ್ತು ಜಗತ್ತು ಆತನ ಕಾರ್ಯವಾಗಿದೆ. ಒಂದು ಉದಾಹರಣೆಯ ಮೂಲಕ ಈ ಮಾತನ್ನು ಸ್ಪಷ್ಟಪಡಿಸಲಾಗುತ್ತದೆ. ಮಣ್ಣಿನಿಂದ ಮಡಕೆಯಾಗುತ್ತದೆ. ಮಣ್ಣು ಕಾರಣವಾಗಿದೆ ಮಡಕೆ ಅದರ ಕಾರ್ಯ. ಮಡಕೆಯಿಂದ ಮಣ್ಣನು ತೆಗೆದುಕೊಂಡು ಬಿಟ್ಟರೆ ಮಡಕೆಯ ಅಸ್ತಿತ್ವ ಎಲ್ಲಿರುವುದು? ಆದ್ದರಿಂದ ಮಣ್ಣು ಮತ್ತು ಮಡಕೆಯಲ್ಲಿ ಅಭೇದವೆಂದು ಒಪ್ಪಬೇಕಾಗುತ್ತದೆ. ಎರಡನೆಯ ವಿಚಾರ– ಮಣ್ಣು ತಾನು ಸ್ವತಃ ಮಡಕೆಯಲ್ಲ. ಮಡಕೆಯ ಗುಣ ಮತ್ತು ಧರ್ಮಗಳು ಮಣ್ಣಿನಲ್ಲಿ ಇಲ್ಲ. ಈ ಸಂದರ್ಭದಲ್ಲಿ ಮಣ್ಣು ಮತ್ತು ಮಡಕೆ ಇವುಗಳಲ್ಲಿ ಭೇದವನ್ನು ಒಪ್ಪಬೇಕಾಗುತ್ತದೆ. ಆದ್ದರಿಂದ ಮಣ್ಣು ಮತ್ತು ಮಡಕೆ ಇವುಗಳಲ್ಲಿ ಭೇದವೂ ಇದೆ ಅಭೇದವೂ ಇದೆ. ಇದೇ ರೀತಿಯಾಗಿ ಬ್ರಹ್ಮ ಮತ್ತು ಜೀವ, ಜಗತ್ತಿನಲ್ಲಿಯೂ ಕೂಡ ಭೇದ ಮತ್ತು ಅಭೇದ, ದ್ವೈತ ಮತ್ತು ಅದ್ವೈತ ಎರಡೂ ಗುಣಗಳನ್ನು ಕಾಣಬಹುದಾಗಿದೆ. ಆದ್ದರಿಂದಲೇ ಇದಕ್ಕೆ ಭೇದಾಭೇದ ವಾದ ಅಥವಾ ದ್ವೈತಾದ್ವೈತ ಮತ ಎಂದು ಕರೆಯಲಾಗುತ್ತದೆ.

*–ಮುಂದುವರೆಯುತ್ತದೆ.*

# ಎಲಾ ಹೋತೇ!.... ಯೆಂದರೆ ಯಾರು?

– ಡಾ|| ಬಸವರಾಜ ಮೋದಿ *

ಕಿನ್ನರಿ ಬ್ರಹ್ಮಯ್ಯ ಬಸವಾದಿ ಪ್ರಮಥರಲ್ಲಿ ಬಹಳ ವಿಶಿಷ್ಟವಾದ ವ್ಯಕ್ತಿ. ಮೂಲತಃ ಅಕ್ಕಸಾಲಿಗ ವೃತ್ತಿಯವ. ತನ್ನ ವೃತ್ತಿ ಜೀವನದಲ್ಲಿಂಯು ಒಂದು ಕಹಿ ಘಟನೆಯಿಂದಾಗಿ, ಜಿಗುಪ್ಸೆಗೊಂಡು ಕಲ್ಯಾಣಕ್ಕೆ ತೆರಳಿ, ತ್ರಿಪುರಾಂತಕ ದೇವಾಲಯದಲ್ಲಿ ಕಿನ್ನರಿಯನ್ನು ನುಡಿಸುತ್ತ ಭಕ್ತರಿಂದ ಕಾಣಿಕೆಗಳನ್ನು ಸ್ವೀಕರಿಸುತ್ತ ಸೇವಿಸುತ್ತ ತನ್ನ ಕಾಯಕ ನಡೆಸುತ್ತ ಇರುತ್ತಾನೆ. ಕಿನ್ನರಿ ಬ್ರಹ್ಮಯ್ಯ ತನ್ನದೇ ಆದ ನಿಲುವುಗಳನ್ನು ಹೊಂದಿದ್ದವನಾಗಿರುತ್ತಾನೆ. ಒಮ್ಮೆ ಕಿನ್ನರಿ ಬ್ರಹ್ಮಯ್ಯ ತ್ರಿಪುರಾಂತಕ ದೇವರ ಸನ್ನಿಧಾನದಲ್ಲಿದ್ದಾಗ, ಒಂದು ಹೋತ ಚೀರುತ್ತ ದೇವಸ್ಥಾನವನ್ನು ಹೊಕ್ಕುತ್ತದೆ. ಹೋತ ತನಗೆ ಶರಣಾಗಿದೆಯೆಂದು ಭಾವಿಸಿ, ತನ್ನ ಸಂರಕ್ಷಣೆ ನೀಡಿ, ಅದಕ್ಕೆ ಲಿಂಗಮುದ್ರೆ ಒತ್ತುತ್ತಾನೆ. ಅದೇ ಹೊತ್ತಿಗೆ ಮಚ್ಚಿನೊಂದಿಗೆ ದೇವಾಲಯ ಪ್ರವೇಶಿಸಿದ ವಿಟ ನೊಬ್ಬ ಹೋತವನ್ನು ಎಳೆಯತೊಡಗುತ್ತಾನೆ. ಎಳೆದಾಟ ದಲ್ಲಿ ಆ ಕುರಿ ಚೀರತೊಡಗಿದಾಗ ಕಿನ್ನರಯ್ಯ ಅದನ್ನು ಆ ವಿಟನಿಂದ ಬಿಡಿಸಿಕೊಂಡು ಅದರ ರಕ್ಷಣೆಗಾಗಿ ನಿಲ್ಲುತ್ತಾನೆ. ಆಗ ವಿಟನು ತನ್ನ ಪ್ರೇಯಸಿಯ ಹರಕೆಯಂತೆ ಆ ಕುರಿಯನ್ನು ಮಾರಿಗೆ ಬಲಿ ಕೊಡಬೇಕಾಗಿದ್ದುದ್ದರಿಂದ ಅದನ್ನು ಬಿಟ್ಟುಕೊಡಲು ಕೇಳಿಕೊಳ್ಳುತ್ತಾನೆ. ಕಿನ್ನರಯ್ಯ ಕುರಿಗೆ ಈಗಾಗಲೇ ಲಿಂಗಮುದ್ರೆ ಬಿದ್ದಿರುವುದರಿಂದ ಆ ಕುರಿಯನ್ನು ಕೊಡಲಾಗುವುದಿಲ್ಲವೆಂದು ಹೇಳಿ, ಅದರ ಬದಲಾಗಿ ವಿಟನಿಗೆ ಒಂದು ಸಾವಿರ ಹೊನ್ನನ್ನು ನೀಡುತ್ತಾನೆ. ಆದರೆ ವಿಟನ ಪ್ರೇಯಸಿ ಹಠಮಾರಿತನದಿಂದ ಹಣವನ್ನು ಸ್ವೀಕರಿಸದೆ, ಅದೇ ಕುರಿಯನ್ನು ಬಲಿಕೊಡಲೇ ಬೇಕೆಂದು ಒತ್ತಾಯಿಸುತ್ತಾಳೆ. ವಿಟನು ನಿರ್ವಾಹವಿಲ್ಲದೆ ಕಿನ್ನರಿಯ್ಯನಲ್ಲಿಗೆ ತಿರುಗಿ ಬಂದು ಆ ಕುರಿಯನ್ನು ತಿರುಗಿ ಕೊಡುಯೆಂದು ಜಗಳ ತೆಗೆಯುತ್ತಾನೆ. ಈ ಜಗಳದಲ್ಲಿ ವಿಟನ ಕೊಲೆಯಾಗುತ್ತದೆ. ಈ ಸಮಾಚಾರ ಬಿಜ್ಜಳ ನವರೆಗೂ ಮುಟ್ಟುತ್ತದೆ; ಬಸವಣ್ಣನಿಗೂ ತಿಳಿಯುತ್ತದೆ.

ಈ ಘಟನೆಯ ಹಿನ್ನಲೆಯನ್ನು ಇಟ್ಟುಕೊಂಡು ಬಸವಣ್ಣ ಕೆಳಗಿನ ಈ ವಚನ ಬರೆದಿರಬಹುದೆ?

*ಮಾತಿನ ಮಾತಿಂಗೆ ನಿನ್ನ ಕೊಂದಹರೆಂದು*
*ಎಲೆ ಹೋತೇ ಅಳು, ಕಂಡಾ!*
*ವೇದವನೋದಿದವರ ಮುಂದೆ ಅಳು, ಕಂಡಾ!*
*ಶಾಸ್ತ್ರ ಕೇಳಿದವರ ಮುಂದೆ ಅಳು, ಕಂಡಾ!*
*ನೀನತ್ತುದಕ್ಕೆ ತಕ್ಕುದ ಮಾಡುವ ಕೂಡಲಸಂಗಮದೇವ*

(ಬ.ವ. 573)

ಸ್ವಲ್ಪ ಬದಲಾವಣೆಗಳೊಂದಿಗೆ ಈ ಕೆಳಗಿನ ವಚನವೂ ಅಲ್ಲಲ್ಲಿ ಚಲಾವಣೆಯಲ್ಲಿರುವುದು ಕಂಡು ಬರುತ್ತದೆ.

*ಮಾತು ಮಾತಿಂಗೆ ನಿನ್ನ ಕೊಂದಹರೆಂದು ಎಲೆ ಹೋತೇ,*
*ಅಳು ಕಂಡಾ!*
*ವೇದವನೋದಿದವರ ಮುಂದೆ ಅಳುಕಂಡಾ*
*ಶಾಸ್ತ್ರವನೋದಿದವರ ಮುಂದೆ ಅಳುಕಂಡಾ*
*ನೀನತ್ತುದದಕ್ಕೆ ತಕ್ಕುದ ಮಾಡುವ ಕೂಡಲಸಂಗಮದೇವ*

ಇವುಗಳಲ್ಲಿ ಅರ್ಥ ವಿನ್ಯಾಸಗಳಲ್ಲಿ ವ್ಯತ್ಯಾಸಗಳಾಗ ದಿದ್ದರೂ ಸೂಕ್ಷ್ಮವಾಗಿ ಅವಲೋಕಿಸಿದಾಗ ಸ್ವಲ್ಪ ಬೇರೆ ಅರ್ಥವನ್ನು ನಾವು ಮಾಡಬಹುದು.

ತಮ್ಮ ಕಷ್ಟಗಳ ಪರಿಹಾರಕ್ಕಾಗಿ, ತಮ್ಮ ಸುಖ ಸಂತೋಷಗಳ ಅಭಿವೃದ್ಧಿಗಳಿಗಾಗಿ ಮತ್ತು ದೇವರು ತಮ್ಮನ್ನು ಮೆಚ್ಚುವನೆಂಬ ಭ್ರಮೆಯಿಂದ ಪಶು, ಪಕ್ಷಿ, ಪ್ರಾಣಿ. (ಹಲವು ಸಲ ಮನುಷ್ಯರನ್ನೇ) ಬಲಿ ನೀಡುವ ಮೌಢ್ಯ ಪದ್ಧತಿ ಜಗತ್ತಿನಾದ್ಯಂತ ಇಂದಿಗೂ ಹಬ್ಬಿದೆ.

ಹಾಗೆ ನೋಡಿದರೆ ನಮ್ಮ ದೇಶದಲ್ಲಿ ಪ್ರಾಣಿಗಳ ಬಲಿ ಕೊಡುವ ಅಮಾನುಷ ಪದ್ಧತಿಯು ನಾಗರಿಕತೆ ಬೆಳೆದು ಬಂದ ವೇದಗಳ ಕಾಲದಿಂದಲೂ ನಡೆದುಕೊಂಡು ಬಂದಿರುವುದನ್ನು ನೋಡುತ್ತೇವೆ.

* 'ಜಗಜ್ಯೋತಿ', 23, ವಿಶ್ವೇಶ್ವರಯ್ಯ ನಗರ, ವಿಶ್ವವಿದ್ಯಾಲಯ ರಸ್ತೆ, ಕಲಬುರ್ಗಿ. ಮೊ: 9448251656.





ವರ್ಣಾಶ್ರಮ ಪದ್ಧತಿಯ ಉಚ್ಚವರ್ಗಕ್ಕೆ ಸೇರಿದವರು ಅಂದರೆ ವೇದಗಳನ್ನು ಓದುವವರು ಮತ್ತು ಕೇಳುವವರು– ವೇದ ಮಂತ್ರಗಳ ಉಚ್ಚಾರಣೆಗಳೊಂದಿಗೆ ಯಜ್ಞ ಯಾಗಾದಿಗಳಲ್ಲಿ ಪ್ರಾಣಿಗಳ ಬಲಿಯನ್ನು ಕೊಡುತ್ತಿದ್ದರೆ, ಶೂದ್ರರು ತಮ್ಮ ಅಜ್ಞಾನದಿಂದಾಗಿ, ಹಲವು ಸಲ ವೈದಿಕರ ಪ್ರೇರಣೆಯಿಂದಾಗಿ, ಹಲಗೆ ತಮ್ಮಟೆ ಗಳೊಂದಿಗೆ ಕುರಿ, ಕೋಣ, ಕೋಳಿಗಳನ್ನು ಹಿಡಿದು ತಂದು, ಮಾರಿ, ಮಸಣಿ ಇತ್ಯಾದಿ ಕೀಳುದೈವಗಳೆದುರಿಗೆ ಆ ಪ್ರಾಣಿ ಗಳನ್ನು ಕಡಿದು ಬಲಿಕೊಡುವ ಪರಿಪಾಠ ಹುಟ್ಟಿಕೊಂಡು ಬಂದಿತ್ತು. 'ಸಕಲ ಜೀವಾತ್ಮರಿಗೆ ಲೇಸನು' ಬಯಸುವ ಮನೋಭಾವದ ಬಸವಣ್ಣ ಈ ಅಮಾನುಷ ಪದ್ಧತಿಯನ್ನು ಮೇಲಿನ ವಚನದಲ್ಲಿ ಖಂಡಿಸುತ್ತಿದ್ದಾನೆ. ಇದೊಂದು ಸರಳವಾದ 'ಪ್ರಾಣಿಗಳ' ಬಗ್ಗೆ ಕಾಳಜಿ ಹೊಂದಿರುವ ವಿಶಿಷ್ಟ ವಾದ ವಚನವಾಗಿದೆ. ಬಸವಣ್ಣ ಈ ವಚನದಲ್ಲಿ 'ಮಾತು ಮಾತಿಂಗೆ'ಯೆಂಬ ಪದ ಪ್ರಯೋಗ ಮಾಡಿ 'ಮಾತು ಮಾತಿಗೆ', 'ವಿನಾಕಾರಣ'. 'ಸುಮ್ಮಸುಮ್ಮನೆ', 'ನೈತಿಕ, ಬೌದ್ಧಿಕ ಆಧಾರಗಳಿಲ್ಲದೆ' ಪ್ರಾಣಿ ಬಲಿಕೊಡುತ್ತಿದ್ದಾರಲ್ಲಯೆಂದು ಅರ್ಥ ನೀಡುತ್ತಾ ವಚನದ ಮುಂದಿನ ಸಾಲುಗಳಿಗೆ ಪೀಠಿಕೆ ಹಾಕುತ್ತಾನೆ. 'ಮಾತಿನ ಮಾತಿಂಗೆ' ಯೆಂಬ ಪದ ಪ್ರಯೋಗವು ವೇದಶಾಸ್ತ್ರಗಳ (ಮಾತಿನ) ನುಡಿಯಂತೆವೆಂಬ ವಿಶಿಷ್ಟವಾದ ಅರ್ಥವನ್ನು ನೀಡುತ್ತದೆ. ಇಲ್ಲಿ ಬಸವಣ್ಣ ವೇದಶಾಸ್ತ್ರಗಳನ್ನು ಬೆಲೆಯಿಲ್ಲದ 'ಕೇವಲ ಮಾತು'ಗಳೆಂದು ಹೀಯಾಳಿಸುತ್ತಾ ವ್ಯಂಗ್ಯವಾಡುತ್ತಿರುವುದು ನಮಗೆ ಕಂಡು ಬರುತ್ತದೆ. ಈ ವಚನದಲ್ಲಿಯ 'ಅಳುಕಂಡಾ'ಯೆಂಬ ಶಬ್ದದ ಪುನರಪಿ ಬಳಕೆಯು ಬಸವಣ್ಣನಲ್ಲಿಯ ಅಂತಃಕರುಣೆಯನ್ನು ಮತ್ತು ಮೂಕಪ್ರಾಣಿಗಳ ಬಗ್ಗೆ ಇರುವ ಅವನ ಅನುಕಂಪನೆಯನ್ನು ಹೊರ ಹಾಕುವುದರೊಂದಿಗೆ, ಬಲಿ ಕೊಡಲು ಹೋಗುತ್ತಿರು ವವರ ಬಗ್ಗೆ ಅವನ ತಾತ್ಸಾರವನ್ನೂ ಹೊರಸೂಸುತ್ತದೆ. ಅಷ್ಟೇ ಅಲ್ಲದೆ ನಮ್ಮ ಅಂತಃಕರಣವನ್ನೂ ಕಲಕಿ ನಾವೂ ಈ ಮೂಕ ಪ್ರಾಣಿಗಳ ಬಗ್ಗೆ ಅನುಕಂಪಹೊಂದುವಂತೆ ಮಾಡುತ್ತದೆ.

ಮುಂದಿನ ಸಾಲುಗಳಲ್ಲಿ, ಬಸವಣ್ಣನ ಅನುಕಂಪವು ಹರಿದು, ಹೋತನ್ನು ಸಮಾಧಾನ ಪಡಿಸುತ್ತದೆ. 'ವೇದವ ನೋದಿದವರ ಮುಂದೆ ಅಳುಕಂಡೆಯಾ' 'ಶಾಸ್ತ್ರವನ್ನೋದಿ ದವರ ಮುಂದೆ ಅಳುಕಂಡೆಯಾ, ಅತ್ತು ನೋಡಿದಯಾ' ಯೆಂದು ಹೇಳುತ್ತಾ, ಇದರಿಂದ ಅದಕ್ಕೆ ಯಾವುದೇ ಉಪ ಯೋಗವಿಲ್ಲವೆಂದೂ ಸೂಚಿಸುತ್ತಾನೆ. ಯಾಕೆಂದರೆ ವೇದ ಶಾಸ್ತ್ರಗಳು ಪ್ರಾಣಿವಧೆಯನ್ನೇ ಹೇಳುತ್ತಿರುವುದರಿಂದ, ವೇದ ಶಾಸ್ತ್ರ ಓದಿದವರಲ್ಲಿ ಪಶು, ಪಕ್ಷಿ, ಪ್ರಾಣಿಗಳ ಬಗ್ಗೆ ದಯೆ,

ಅನುಕಂಪಗಳು ಇರುವುದಿಲ್ಲವೆಂಬ ಸತ್ಯಸಂಗತಿಯನ್ನು ಬಿಚ್ಚಿಡುತ್ತಾ ಅಂತಹವರ ಮುಂದೆ ಅತ್ತರೆ ಏನೂ ಉಪ ಯೋಗವಿಲ್ಲವೆಂದು ಸೂಚಿಸುತ್ತಾನೆ. ಈ ಕಹಿ ಸತ್ಯ ಕೇಳಿ, ಎದೆ ಒಡೆದುಕೊಂಡ ಹೋತಿಗೆ 'ನೀನತ್ತುದಕ್ಕೆ ಕೂಡಲ ಸಂಗಮನು ತಕ್ಕುದ ಮಾಡುವ'ನೆಂದು ಸಮಾಧಾನ ಪಡಿಸುತ್ತಾನೆ. ಸಾಂತ್ವನ ನೀಡುತ್ತಾನೆ. ಅದಕ್ಕೆ ಜೀವದ ಭರವಸೆ ಕೊಡುತ್ತಾನೆ. ಯಜ್ಞ ಯಾಗಾದಿಗಳಲ್ಲಿ ಪ್ರಾಣಿ ಬಲಿಕೊಡುವ ಅಮಾನುಷ ಪದ್ಧತಿಯ ಕಡು ವಿರೋಧಿ ಮತ್ತು ದಯಾಮಯಿಯಾದ, ಶಿವ(ದೇವರು) ಪ್ರಾಣಿ ಬಲಿಕೊಡುವವರನ್ನು ಶಿಕ್ಷಿಸಿಯೇ ಶಿಕ್ಷಿಸುತ್ತಾನೆಂದು ಬಸವಣ್ಣ ಭರವಸೆ ನೀಡುತ್ತಾನೆ. ಈ ಎರಡೂ ವಾಕ್ಯಗಳಲ್ಲಿ ಪ್ರಾಣಿಹಿಂಸೆ ಪ್ರತಿಪಾದಿಸುವ ವೇದಶಾಸ್ತ್ರಗಳ ಬಗ್ಗೆ ಇರುವ ತನ್ನ ಅಸಹನೆಯನ್ನು ಮತ್ತು ಜಿಗುಪ್ಸೆಯನ್ನು ಬಸವಣ್ಣ ಹೊರಹಾಕುತ್ತಾನೆ.

ಬಲಿಪೀಠಕ್ಕೆ ಹೋಗುತ್ತಿಥುವ ಹೋತನ್ನು ಕುರಿತು 'ಹೋತೇ..ಹೋತೆ...'ಯೆಂಬ ಬಸವಣ್ಣನ ಸಂಬೋಧ ನೆಯು, ಒಳಾರ್ಥದಲ್ಲಿ, ಶೋಷಿತರನ್ನು ಶೂದ್ರನ್ನು ಕುರಿತು ಇರಬಹುದಾಗಿದೆ. ಯಾಕೆಂದರೆ ವೈದಿಕರು ಶೂದ್ರರನ್ನು ಪ್ರಾಣಿಗಳಿಗಿಂತ ಕನಿಷ್ಟರಾಗಿ ಕಾಣುತ್ತಿದ್ದರು. ಹೆಜ್ಜೆ ಹೆಜ್ಜೆಗೆ, ಮಾತುಮಾತಿಗೆ, ವಿನಾಕಾರಣವಾಗಿ ಅವರಿಗೆ ಸಾಮಾಜಿಕ ವಾಗಿ, ಧಾರ್ಮಿಕವಾಗಿ, ಸಾಂಸ್ಕೃತಿಕವಾಗಿ ತೊಂದರೆ ಗಳನ್ನು ಕೊಡಲಾಗುತ್ತಿತ್ತು. ಅವರುಗಳನ್ನು ಹೆಚ್ಚು ಕಡಿಮೆ ಯಾಗಿ ಬಲಿಪಶುಗಳನ್ನಾಗಿಯೇ ಮಾಡಲಾಗಿತ್ತು. ಶೂದ್ರರ ಸರ್ವಾಂಗೀಣ ಶೋಷಣೆಗಳಿಗೆ ವೇದಶಾಸ್ತ್ರಗಳ ಸಮ್ಮತಿಯೂ ಇದೆಯೆಂದು ವೈದಿಕರು ಹೇಳುತ್ತಿದ್ದರು. ತಮ್ಮನ್ನು ಸಮರ್ಥಿಸಿಕೊಳ್ಳುತ್ತಿದ್ದರು. ಹೀಗಾಗಿ ಶೂದ್ರರಿಗೆ ಅಳುವುದೊಂದೇ ದಾರಿಯಾಗಿತ್ತು. ಆದರೆ ಕೇಳುವವ ರಿರಲಿಲ್ಲ. ಹೀಗಾಗಿ ಶೂದ್ರರ ರಕ್ಷಣೆಯ ಹೊಣೆಯು, ಯಜ್ಞ ಯಾಗಾದಿಗಳ ಮತ್ತು ವೈದಿಕರಲ್ಲಿಯ ವೈರುಧ್ಯಗಳ 'ವಿರೋಧಿಯಾದ ಶಿವನ ಮೇಲೆ

ಇದೆಯೆಂದು ಇಲ್ಲಿ ಬಸವಣ್ಣ ಹೇಳುತ್ತಿರುವುದು ಕಂಡು ಬರುತ್ತದೆ. ಇದು ಶೂದ್ರರ ಬಗ್ಗೆ ಮಿಡಿಯುತ್ತಿರುವ ಬಸವಣ್ಣನ ಕರುಣಾಮಯಿ ಹೃದಯುವನು ಎತ್ತಿ ತೋರಿಸುತ್ತದೆ. ಈ ರೀತಿಯಲ್ಲಿ ಬಸವಣ್ಣ ಹೋತ ಮತ್ತು ಶೂದ್ರರನ್ನು ಸಮೀಕರಣಗೊಳಿಸಿ, ಅಂತಃಕರಣ ಕಲಕುವಂತಹ, ಶೂದ್ರರ ಕನಿಷ್ಟ ಜೀವನವನ್ನು ನಮ್ಮೆದುರಿಗೆ ಬಿಚ್ಚಿಡುತ್ತಾನೆ.

ಒಂದು ವಿಷಾದದ ಸಂಗತಿಯೆಂದರೆ ಇಂದಿಗೂ ನಮ್ಮ ದೇಶದಲ್ಲಿ ಅಷ್ಟೇ ಅಲ್ಲ, ಹೊರ ದೇಶಗಳಲ್ಲಿಯೂ ದೇವರ ಸಂಪ್ರೀತಿಗೆಂದು ಪಶು, ಪಕ್ಷಿ, ಪ್ರಾಣಿಗಳ ಬಲಿ ಕೊಡುವುದು ಅವ್ಯಾಹತವಾಗಿ ನಡೆದೇ ಇದೆ! ಮೊನ್ನೆ ಮೊನ್ನೆ ನಮ್ಮ ನಾಡಿನಲ್ಲಿಯೇ ನೂರಾರು ಕುರಿಗಳನ್ನು ಕೀಳು ದೈವಗಳಿಗೆ ಬಲಿಕೊಟ್ಟ ಸಂಗತಿಯು ನಾವೆಲ್ಲರೂ ತಲೆ ತಗ್ಗಿಸುವಂತೆಯೇ ಮಾಡಿತು!

ದೇವರು ಸಕಲ ಜೀವಿಗಳ ಹುಟ್ಟುವಿಕೆಗೆ ಕಾರಣ ನಾಗಿರುವುದರಿಂದ ಮತ್ತು ಅವನು ದಯಾಮಯನಾಗಿರು ವುದರಿಂದ, ಅವನು ಯಾವ ಪ್ರಾಣಿಬಲಿಯನ್ನೂ ಬೇಡ ಲಾರನೆಂಬುವ ನಗ್ನ ಸತ್ಯ ಇಂದಿನವರೆಗೆ ಇನ್ನೂ ಹೊಳೆಯದಿರುವುದು ದೊಡ್ಡ ವೈಚಾರಿಕ ದುರಂತವಾಗಿದೆ. ಇಂದಿನ ವೈಜ್ಞಾನಿಕ ಯುಗಕ್ಕೆ ಈ ಪ್ರಾಣಿ ಬಲಿ ಒಂದು ಸವಾಲಾಗಿದೆ. ಈಗಿನ ಜನಾಂಗದ ಬೌದ್ಧಿಕತೆ ಬಗ್ಗೆ ಅನುಮಾನವನ್ನುಂಟೂ ಮಾಡುತ್ತದೆ! ಆದ್ದರಿಂದ ಪ್ರಾಣಿಗಳ ಬಲಿ ನೀಡುವವರಿಗೆ ದೇವರಿಗೆ ಕುರಿಬೇಡ, ಮರಿಬೇಡ ಕೇವಲ ಶುದ್ಧ ಹೃದಯವೇ ಸಾಕೆಂದು ಹೇಳುತ್ತ, ಅವರಿಗೆ ಅಹಿಂಸೆಯ ತತ್ವ ತಿಳಿಸಿಕೊಡ ಬೇಕಾಗಿದೆ. ಅಷ್ಟೇ! ಆ ದಿಕ್ಕಿನಲ್ಲಿ ಬಸವಣ್ಣನ ಮೇಲಿನ ವಚನ ಶ್ರೇಷ್ಟ ಸಾಧನವಾಗಬಲ್ಲದು.

ಆಧಾರ :

1. ಬಸವಣ್ಣನವರ ವಚನ ಸಂಪುಟ :
ಸಮಗ್ರ ವಚನ ಸಂಪುಟ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಕರ್ನಾಟಕ ಸರ್ಕಾರ, ಬೆಂಗಳೂರು.

2, ಬಸವಣ್ಣ ಪ್ರದೀಪಿಕೆ : ಬಸವಶ್ರೀ ಸಿದ್ಧರಾಮ ಶರಣರು, ಬೆಲ್ದಾಳ, ಡಿ.ಎಂ. ಧನ್ನೂರ, ಬಸವತತ್ವ ಮಹಾವಿದ್ಯಾಲಯ, ಚಿತ್ರದುರ್ಗ.

## ಅಭಿನಂದನೆ



ಸುಕ್ಷೇತ್ರ ಶ್ರೀ ಕೋಡಿಮಠ ಮಹಾಸಂಸ್ಥಾನದಲ್ಲಿ ಲಿಂ. ಶ್ರೀ ಎಂ.ಎಸ್. ನಾಗೇಂದ್ರ ಇವರ ಸ್ಮರಣಾರ್ಥ ಏರ್ಪಡಿಸಿದ್ದ ಧಾರ್ಮಿಕ ಕಾರ್ಯಕ್ರಮದಲ್ಲಿ ಶ್ರೀ ಸಿದ್ಧಗಂಗಾ ಮಠದ ಹಿತೈಷಿಗಳು, ಅಭಿಮಾನಿಗಳು, ಭಕ್ತರು ಹಾಗೂ ಸಿದ್ಧಗಂಗಾ ಮಾಸಪತ್ರಿಕೆಯ ಆಜೀವ ಸದಸ್ಯರು ಆದ ಶ್ರೀ ಕೆ.ಪಿ. ಶಿವರಾಮೇಗೌಡರ ಮಗ

**ಶ್ರೀ ಕೆ.ಎಸ್. ತೀರ್ಥಪ್ಪನವರಿಗೆ**

**'ಸಮಾಜ ಸೇವಾರತ್ನ'**

ಎಂಬ ಪ್ರಶಸ್ತಿ ನೀಡಿ, ಸನ್ಮಾನಿಸಿ ಗೌರವಿಸಿದೆ. ಶ್ರೀಯುತರ ಸೇವೆ ನಾಡಿಗೆ, ಸಮಾಜಕ್ಕೆ ಹೆಚ್ಚು ದೊರೆಯುವಂತಾಗಲಿ, ಶ್ರೀ ಸಿದ್ಧಗಂಗಾ ಗುರುಪರಂಪರೆ ಅವರಿಗೆ ಅನುಗ್ರಹ ಆಶೀರ್ವಾದ ನೀಡಲಿ ಎಂದು 'ಸಿದ್ಧಗಂಗಾ' ಹಾರೈಸುತ್ತದೆ.

### ಸಿದ್ಧಗಂಗಾ ಮಾಸಪತ್ರಿಕೆ ಚಂದಾದಾರರ ಗಮನಕ್ಕೆ

ಚಂದಾದಾರರ ಸರಿಯಾದ ವಿಳಾಸವಿಲ್ಲದೆ ಪತ್ರಿಕೆಗಳು ನಮ್ಮ ಕಾರ್ಯಾಲಯಕ್ಕೆ ಹಿಂದಕ್ಕೆ ಬರುತ್ತಿವೆ. ತಾವು ದಯವಿಟ್ಟು ವಿಳಾಸ ಬದಲಾವಣೆಯಾದಲ್ಲಿ ಚಂದಾದಾರರ ಸಂಖ್ಯೆ ಹಾಗೂ ಅಂಚೆ ಪಿನ್‌ಕೋಡ್ ಇರುವ ಸರಿಯಾದ ವಿಳಾಸದ ಜೊತೆಗೆ ಮೊಬೈಲ್ ಫೋನ್‌ಸಂಖ್ಯೆ ಸಹ ಪತ್ರಿಕೆ ಕಾರ್ಯಾಲಯಕ್ಕೆ ತಿಳಿಸಲು ಕೋರಲಾಗಿದೆ.

–ಪ್ರಕಾಶಕರು





# ಮಹಾತ್ಮರಂ ನೆನೆವುದೇ ಘನಮುಕ್ತಿ

*(ಮುಂದುವರಿದ ಭಾಗ)*

**– ಹೆಚ್. ಗಂಗಾಧರನ್ ***

**ರಾಷ್ಟ್ರಪ್ರೇಮಿ ಗೌರೀಶಂಕರಸ್ವಾಮಿಗಳು :**

ಗೌರೀಶಂಕರಸ್ವಾಮಿಗಳು ಒಂದು ಮಠದ ಚರ ಜಂಗಮರಾಗಿ, ಪ್ರೌಢವಿದ್ಯಾವಿಶಾರದರಾಗಿ, ದೊಡ್ಡ ದಾರ್ಶನಿಕರೆನಿಸಿ, ಕೇವಲ ಭಾವನಾ ಸಾಮ್ರಾಜ್ಯಾನಂದದಲ್ಲಿ ಮುಳುಗಿದವರಲ್ಲ. ಇವರಿಗೆ ಆಶ್ರಮ ಧರ್ಮದಲ್ಲಿ ಆಚಾರ ವಿಚಾರದಲ್ಲಿ ಸಾಮಯಿಕ, ಶ್ರದ್ಧಾ ವಿಶೇಷದಲ್ಲಿ ಎಷ್ಟು ಆಸಕ್ತಿಯೋ ರಾಷ್ಟ್ರೀಯ ಸ್ವಾತಂತ್ರ್ಯ ಸಂಗ್ರಾಮದಲ್ಲೂ ಅಷ್ಟೇ ಆಸಕ್ತಿ. ಇವರ ಐತಿಹಾಸಿಕ ಪ್ರಜ್ಞೆ, ದಾರ್ಶನಿಕ ಜ್ಞಾನ, ಪ್ರಶಾಂತ ಗಂಭೀರವಾಗಿಯೂ ವಿಚಾರ ಪ್ರಚೋದಕವಾಗಿಯೂ ಕೊಡುತ್ತಿದ್ದ ಉಪನ್ಯಾಸ ವೈಖರಿಗಳು ಮಹಾತ್ಮಾಗಾಂಧಿ, ಮದನ ಮೋಹನ ಮಾಳವೀಯ, ಡಾ॥ ಭಗವಾನದಾಸ, ಆಚಾರ್ಯ ಕೃಪಲಾನಿ ಮೊದಲಾದ ಆಗಿನ ರಾಷ್ಟ್ರೀಯ ಕಾಂಗ್ರೆಸ್ಸಿನ ಅಧ್ಯಕ್ಷರುಗಳನ್ನು ಆಕರ್ಷಿಸಿದ್ದವು. ಗಾಂಧೀಜಿ ಯವರು ಕಾಶಿಗೆ ಬಂದಾಗಲೆಲ್ಲ ಸಾಮಾನ್ಯವಾಗಿ ಭಾರತರತ್ನ ಡಾ. ಭಗವಾನದಾಸರ ಮನೆಯಲ್ಲಿ ಬಿಡಾರ ಮಾಡುತ್ತಿದ್ದರು. ಭಾರತೀಯ ತತ್ವಶಾಸ್ತ್ರ, ದಾರ್ಶನಿಕ ಜ್ಞಾನದ ಬಗೆಗೆ ವಿಶೇಷಾ ಸಕ್ತರೆನಿಸಿದ್ದ ಭಗವಾನದಾಸರು ಗಾಂಧಿಯವರಲ್ಲಿ ಈ ವಿಚಾರ ವಾಗಿ ಚರ್ಚಿಸುತ್ತಿದ್ದಾಗಲೆಲ್ಲ ತಮ್ಮ ಆಪ್ತರೆನಿಸಿದ್ದ ಗೌರೀಶಂಕರ ಸ್ವಾಮಿಗಳನ್ನು ಮನೆಗೆ ಕರೆಸಿ ಚರ್ಚೆಯಲ್ಲಿ ಪಾಲ್ಗೊಳ್ಳುವಂತೆ ಮಾಡುತ್ತಿದ್ದರು. ಗಾಂಧಿಯವರಿಗೂ, ಗೌರೀಶಂಕರಸ್ವಾಮಿ ಗಳವರಿಗೂ ಪರಸ್ಪರ ಪರಿಚಯವಾದದ್ದು ಹೀಗೆ. ಮುಂದೆ ಈ ಪರಿಚಯವೇ ಗಾಢವಾಗಿ ಮೈತ್ರಿಯನ್ನು ತಳೆಯಿತು. ಗಾಂಧಿಯವರ ವಿಚಾರಧಾರೆಗಳು ಗೌರೀಶಂಕರ ಸ್ವಾಮಿ ಗಳವರಿಗೆ ಬಹಳ ಅಪ್ಯಾಯಮಾನವೆನಿಸಿದವು. ಶ್ರೀಗಳವರ ಬಗೆಗೆ ಗಾಂಧೀಜಿಯವರು 'ತಾವು ಸಂಸಾರದ ಹಂಗು ತೊರೆದು, ಸನ್ಯಾಸ ಸ್ವೀಕರಿಸಿದವರಾದರೂ, ರಾಷ್ಟ್ರದ ಉಳಿವಿಗೆ, ಸ್ವಾತಂತ್ರ್ಯ ಪ್ರಾಪ್ತಿಗೆ ಶ್ರಮಿಸುವುದು ವೈಯಕ್ತಿಕ ಮುಕ್ತಿಗಾಗಿ ಸಾಧಿಸುವ ಸಾಧನೆಗಿಂತ ಮಿಗಿಲಾದುದು; ನಿಮ್ಮ ಈ ಗಳಿಸಿದ ವಿದ್ಯೆ. ದರ್ಶನ ಜ್ಞಾನ, ಐತಿಹಾಸಿಕ ಪ್ರಜ್ಞೆ, ಶಾಸ್ತ್ರಾದಿ ಪಾಂಡಿತ್ಯಗಳು ಭಾರತ ಸ್ವಾತಂತ್ರ್ಯದ ಸಂಗ್ರಾಮ ದಲ್ಲಿ ಬಳಕೆಯಾಗದಿದ್ದರೆ ಪ್ರಯೋಜನವೇನು?' ಎಂದು ಹೇಳಿದ ಮಾತು ಗೌರೀಶಂಕರಸ್ವಾಮಿಗಳನ್ನು ಬಡಿದೆಬ್ಬಿಸಿ ದಂತಾಯಿತು ಮುಂದೆ ಅವರು ೧೯೪೬ರಲ್ಲಿ ಕರ್ನಾಟಕಕ್ಕೆ ತಮ್ಮ ಮಠಕ್ಕೆ ಬರುವವರೆಗೆ ರಾಷ್ಟ್ರೀಯ ಕಾಂಗ್ರೆಸ್ಸಿನಲ್ಲಿ ಸಕ್ರೀಯವಾಗಿ ಭಾಗವಹಿಸಿ ಕಾರ್ಯ ನಿರ್ವಹಿಸುತ್ತಿದ್ದರು. ಉದ್ಬೋಕವೂ, ತತ್ವಶಾಸ್ತ್ರ ಸಮ್ಮತವೂ ಆದ ಇವರ ಭಾಷಣಗಳು ಉತ್ತರ ಭಾರತದಲ್ಲಿ ಮನೆಮಾತಾದವು. ಆದರೂ ಇವರು ತಮ್ಮ ಪ್ರಚಾರವನ್ನು ಮಾತ್ರ ಮಾಡು ತ್ತಿರಲಿಲ್ಲ; ಅಷ್ಟೇ ಅಲ್ಲ ಮಾಡಗೊಡುತ್ತಿರಲಿಲ್ಲ. ಕಾರಣ ತಮ್ಮ ಆಶ್ರಮ ಧರ್ಮದ ಮಹತ್ವ. ಒಮ್ಮೆ ವಾರಣಾಸಿ ಜಿಲ್ಲಾ ಕಾಂಗ್ರೆಸ್ಸಿನ ಸಕ್ರಿಯ ಕಾರ್ಯದರ್ಶಿಗಳಾಗಿ ಸಂಘಟನೆಯ ಕಾರ್ಯ ನಡೆಸಿ ಯಶಸ್ಸು ಗಳಿಸಿದರು. ಗುಪ್ತನಾಮದಿಂದ ಪತ್ರಿಕೆಗಳಿಗೆ ಅನೇಕ ಲೇಖನ ಬರೆದರು. ಜನತೆಯನ್ನು ಸ್ವಾತಂತ್ರ್ಯ ಚಳುವಳಿಗೆ ಪ್ರಚೋದಿಸು ವುದಕ್ಕಾಗಿ ವಾರಣಾಸಿ ನಗರದಲ್ಲಿ ಪ್ರಕಟಗೊಳ್ಳುತ್ತಿದ್ದ 'ದುಂದುಭಿ' ಪತ್ರಿಕೆಯ ಸಂಪಾದಕರಾಗಿಯೂ ಕೆಲಸ ಮಾಡಿದರು. ಆ ಪತ್ರಿಕೆಯಲ್ಲಿ ಪ್ರಕಟಗೊಳ್ಳುತ್ತಿದ್ದ ಲೇಖನಗಳ ಪ್ರಖರತೆ ಸರಕಾರದ ಗಮನ ಸೆಳೆಯತೊಡಗಿದವು. ಈ ಕಾರಣಕ್ಕಾಗಿ ಸಂಪಾದಕರಾದ ಶ್ರೀಗಳವರ ಮೇಲೆ ಕ್ರಮ ಕೈಗೊಳ್ಳುವ ಸಂಭವವೂ ಬಂದಿತ್ತು. ಆದರೆ ಗಾಂಧೀಜಿ, ಭಗವಾನದಾಸ, ಕೃಪಲಾನಿ ಮೊದಲಾದವರ ಪ್ರವೇಶದಿಂದ ಸರಕಾರ ಆ ಕಾರ್ಯವನ್ನು ಮುಂದುವರಿಸಲಿಲ್ಲ.

**ರಾಷ್ಟ್ರನಾಯಕರ ಸಲಹೆಗಾರರಾಗಿ ಶ್ರೀಗಳು :**

ಪರಿಸ್ಥಿತಿ ಹೀಗಿದ್ದರೂ ಜಿಲ್ಲಾ ಕಾಂಗ್ರೆಸ್ ಸಮಿತಿಯ ಪ್ರತಿನಿಧಿಗಳಾಗಿ ಶ್ರೀಗಳವರು ಅನೇಕ ಕಾಂಗ್ರೆಸ್ ಅಧಿವೇಶನ ಗಳಲ್ಲಿ ಭಾಗವಹಿಸುತ್ತಿದ್ದರು. ಪಂಡಿತ

* ಹಿರಿಯ ನ್ಯಾಯವಾದಿಗಳು, ಮೈಸೂರು.

ಮೋತಿಲಾಲ ನೆಹರು ರವರು ಶ್ರೀಗಳವರನ್ನು ತುಂಬಾ ಗೌರವದಿಂದ ಕಾಣುತ್ತಿದ್ದರು. ವಿಶೇಷ ಸಂದರ್ಭದಲ್ಲಿ ತಮ್ಮ ಅಧ್ಯಕ್ಷ ಭಾಷಣಗಳ ತಯಾರುಗೊಳಿಸುವ ಸಂದರ್ಭದಲ್ಲಿ ಶ್ರೀಗಳವರ ನೆರವನ್ನು ಅಪೇಕ್ಷಿಸುತ್ತಿದ್ದರು. ಸಾಂಸ್ಕೃತಿಕ ಹಾಗೂ ಧಾರ್ಮಿಕ ಸಮಾರಂಭಗಳಲ್ಲಿ ಭಾಗವಹಿಸಬೇಕಾದ ಸಂದರ್ಭ ಬಂದಾಗ ಅವಶ್ಯವಾಗಿ ಇವರ ಸಲಹೆ ಪಡೆ ಯುತ್ತಿದ್ದರು. ಶ್ರೀಗಳವರೊಡನೆ ಅನೇಕ ವಿಷಯಗಳ ಬಗೆಗೆ ಚರ್ಚಿಸುತ್ತ ಇವರ ಬಹುಶ್ರುತವೂ, ಬಹುಮುಖವೂ ಆದ ಜ್ಞಾನಕ್ಕೆ ಮಣಿಯುತ್ತಿದ್ದರು.

ಅನೇಕ ಧಾರ್ಮಿಕ ಸಮಸ್ಯೆಗಳು ಬಂದಾಗ ಶ್ರೀಗಳವ ರನ್ನು ಗಾಂಧೀಜಿಯವರು ಕರೆಯಿಸಿಕೊಂಡು ಮಾತನಾಡು ತ್ತಿದ್ದುದುಂಟು. ಒಮ್ಮೆ ಒಂದು ಸಮಸ್ಯೆ ಗಾಂಧಿಯವರಿಗೆ ಎದುರಾಯಿತು. ಅದು ಹೀಗೆ: ಗಾಂಧಿಯವರು ಸಾಬರಮತಿ ಆಶ್ರಮದಲ್ಲಿದ್ದಾಗ ಹಸುವಿನ ಕರುವೊಂದು ಉಗ್ರರೋಗಕ್ಕೆ ಬಲಿಯಾಯಿತು. ಗಾಂಧಿಯವರು ಅದಕ್ಕೆ ಎಲ್ಲ ರೀತಿಯ ಔಷಧೋಪಚಾರ, ಆರೈಕೆಗಳನ್ನು ಸ್ವತಃ ಮಾಡಿಸಿದರು. ವೈದ್ಯರು ಅದು ಬದುಕುವುದೇ ಇಲ್ಲವೆಂದೂ ಗಾಂಧೀಜಿಯವರಿಗೆ ತಿಳಿಸಿದರು. ಅದು ಬೇಗನೆ ಸಾಯಲೂ ಇಲ್ಲ; ಬದುಕುವ ಭರವಸೆಯೂ ಉಳಿದಿರಲಿಲ್ಲ. ಆದರೆ ಅದು ಅನುಭವಿಸುವ ವೇದನೆ, ಸಂಕಟಗಳು ಗಾಂಧಿಯವರ ಅಂತಃಕರಣವನ್ನೇ ಕಲಕಿದವು. ಅದನ್ನು ನೋಡುವುದೇ ಗಾಂಧಿಯವರಿಗೆ ಹಿಂಸೆಯಾಗಿ ಕಣ್ಣಲ್ಲಿ ನೀರೂರಿದವು. ಏನು ಮಾಡಬೇಕೆಂಬುದೇ ಗಾಂಧಿಯವರಿಗೆ ಹೊಳೆಯಲಿಲ್ಲ. ಇದು ಬದುಕಿ ಉಳಿಯುವುದಿಲ್ಲ ವೆಂದಾಗ ಈ ಅಸಹನೀಯ ಸಂಕಟವನ್ನು ಇದು ಯಾಕೆ ಅನುಭವಿಸಬೇಕು? ಎಂಬ ತೀರ್ಮಾನಕ್ಕೆ ಗಾಂಧಿಯವರು ಬಂದು ಅದು ಜೀವನ್ಮುಕ್ತವಾಗಲು ತಕ್ಕ ಔಷಧ ಪ್ರಯೋಗಿಸಲು ಡಾಕ್ಟರರಿಗೆ ಹೇಳಿದರು. ಕರು ಸತ್ತು ಹೋಯಿತು. ಜೊತೆಗೆ ಅದರ ಸಂಕಟವನ್ನು ಕಂಡು ಸಂಕಟಗೊಳ್ಳುವ ಮನುಷ್ಯ ಅಂತಃಕರಣಕ್ಕೆ ನೆಮ್ಮದಿ ಯಾಯಿತು. ಈ ಪ್ರಕರಣ ಮುಗಿದಿದ್ದರೆ ಏನೂ ಇರಲಿಲ್ಲ. ಗಾಂಧಿಯವರ ಅಹಿಂಸಾ ತತ್ವವನ್ನು ಪ್ರಶ್ನಿಸುವಂತಹ ಬಿರುಗಾಳಿಯೊಂದು ಇದರಿಂದ ಉಂಟಾಯಿತಂತೆ. ಗಾಂಧಿ ಯವರ ಅಹಿಂಸಾವಾದದ ಬಗೆಗೆ ಅನೇಕರ ಖಂಡನ ಮಂಡನಗಳು ಉಂಟಾದವು. ಈ ಸಂದರ್ಭದಲ್ಲಿ ಗಾಂಧಿಯವರು ಕೈಗೊಂಡ ತೀರ್ಮಾನವನ್ನು ಒಪ್ಪದೆ, 'ಯಾರಿಗೆ ಜೀವ ಕೊಡುವ ಅಧಿಕಾರವಿಲ್ಲವೋ ಅವರಿಗೆ ಜೀವ ತೆಗೆದುಕೊಳ್ಳುವ ಅಧಿಕಾರವೂ ಇರುವುದಿಲ್ಲ' ಎಂದು ಶಾಸ್ತ್ರ ಸಮ್ಮತವಾದ ರೀತಿಯಲ್ಲಿ ವಿವರಣೆ ನೀಡಿದಾಗ ಗಾಂಧಿ ಯವರು ತಮ್ಮದು ತಪ್ಪು ನಿರ್ಧಾರವೆಂದು ಒಪ್ಪಿಕೊಂಡ ರಂತೆ. ಗಾಂಧೀಜಿಯವರು ತಮ್ಮ ತಪ್ಪುಗಳನ್ನು ಒಪ್ಪಿಕೊಂಡೂ ಪುನಃ ತಪ್ಪು ಮಾಡದಂತೆ ವ್ಯವಹರಿಸುವ ಅಗಾಧ ಹೃದಯ ಸಂಪತ್ತುಳ್ಳವರಾಗಿದ್ದರು.

*-ಮುಂದುವರೆಯುತ್ತದೆ.*

## ಅಭಿನಂದನೆ

ತ್ರಿವಿಧ ದಾಸೋಹಿ, ಶತಾಯುಷಿ,
ಮಹಾಶಿವಯೋಗಿ ಪರಮಪೂಜ್ಯ
**ಡಾ॥ ಶ್ರೀ ಶ್ರೀ ಶಿವಕುಮಾರಮಹಾ ಸ್ವಾಮಿಗಳವರ**
ರೇಖಾಚಿತ್ರವನ್ನು ಸೋದರಿಯರಾದ
**ಕುಮಾರಿ ಹೆಚ್.ಎಸ್. ಸಾತ್ವಿಕ ಮತ್ತು ಜೆ.ಎಂ. ವರ್ಷಾ** ತಮ್ಮ ಹಸ್ತಾಕೌಶಲ್ಯದಿಂದ ಅತ್ಯಂತ ಸುಂದರವಾಗಿ ರಚಿಸಿದ್ದಾರೆ. ಈ ಬಾಲಪ್ರತಿಭೆಗಳಿಂದ ಇನ್ನೂ ಹೆಚ್ಚು ಉತ್ತಮ ರೇಖಾಚಿತ್ರಗಳು ಮೂಡಿಬರಲಿ. ಈ ಮಕ್ಕಳಿಗೆ ರಾಜ್ಯ, ರಾಷ್ಟ್ರ ಮತ್ತು ವಿಶ್ವಮನ್ನಣೆ ಸಿಗುವಂತಾಗಲಿ, ಬಸವಾದಿಶರಣರ ಹಾಗೂ ಶ್ರೀ ಸಿದ್ಧಗಂಗಾ ಗುರು ಪರಂಪರೆಯ ಅನುಗ್ರಹ ಆಶೀರ್ವಾದ ಲಭಿಸಲಿ ಎಂದು 'ಸಿದ್ಧಗಂಗಾ' ಹಾರೈಸುತ್ತದೆ.





# ಡಾ॥ ಎಂ.ಎಂ. ಕಲಬುರ್ಗಿ

- ಡಾ॥ ಡಿ.ಎನ್. ಯೋಗೀಶ್ *

**ಭಾ**ರತದಲ್ಲಿ ಬುದ್ಧಿ ನಿಷ್ಠೆಗಿಂತ ಭಾವ ನಿಷ್ಠೆಯೇ ಹೆಚ್ಚು ಎಂದು ಹೇಳುತ್ತಿದ್ದ ಡಾ.ಎಂ.ಎಂ.ಕಲಬುರ್ಗಿ ಯವರು ತುಮಕೂರಿನ ಜೊತೆ ಬುದ್ಧಿ ಪ್ರಧಾನ ಸಂಬಂಧವನ್ನು ಬೆಳೆಸಿಕೊಂಡಿದ್ದರು. ಇವರ ಮನೆದೇವರು ಎಡೆಯೂರಿನ ಸಿದ್ಧಲಿಂಗೇಶ್ವರ. ಅಲ್ಲಿಗೆ ಹೋಗಿಬರುವ ಹವ್ಯಾಸವನ್ನು ಇಟ್ಟುಕೊಂಡಿದ್ದ ಅವರಿಗೆ ಇಲ್ಲಿನವರ ನಿಕಟ ಸಂಪರ್ಕವಿರಲಿಲ್ಲ. ಅವರಿಗೆ ಪದ್ಮಶ್ರೀ ಬಿ.ಶಿವಮೂರ್ತಿ ಶಾಸ್ತ್ರಿಯವರು ಪರಿಚಯವಾದ ಮೇಲೆ ಅವರಿಂದ ಮಧುಗಿರಿ ಮಹಾನಾಡ ಪ್ರಭುಗಳ ಆಸ್ಥಾನ ಕವಿಯಾದ ಮಲ್ಲಿಕಾರ್ಜುನ ರಚಿಸಿದ ಇಮ್ಮಡಿ ಚಿಕ್ಕಭೂಪಾಲ ಸಾಂಗತ್ಯ ಎಂಬ ಹಸ್ತಪ್ರತಿಯನ್ನು ಪಡೆದುಕೊಂಡು ಅದನ್ನು ಸಂಪಾದಿಸಿ ದೀರ್ಘವಾದ ಪ್ರಸ್ತಾವನೆಯನ್ನು ಬರೆದು 1977 ರಲ್ಲಿ ಧಾರವಾಡದ ಮುರುಘಾಮಠದಿಂದ ಪ್ರಕಟ ಮಾಡಿಸಿದರು. ಹೀಗೆ ಮಧುಗಿರಿ ಅರಸರ ಚರಿತ್ರೆಗೆ ಹೊಸ ರೂಪವನ್ನು ನೀಡಿದ ಅವರು ಈ ಜಿಲ್ಲೆಯ ಬಗೆಗೆ ಹೆಚ್ಚು ಆಸಕ್ತಿಯನ್ನು ತೋರಿ ಅದನ್ನು ಶ್ರೀಮಂತಗೊಳಿಸಲು ತೀರ್ಮಾನಿಸಿದರು.

ಸ್ಥಳೀಯ ಅರಸರ ಬಗೆಗೆ ವಿಶೇಷ ಪ್ರೀತಿಯನ್ನಿಟ್ಟುಕೊಂಡಿದ್ದ ಅವರು ಈ ಜಿಲ್ಲೆಯ ಅರಸು ಮನೆತನಗಳ ಬಗೆಗೆ ಆಸಕ್ತಿ ತೋರಿಸುತ್ತಾ 1922 ರಲ್ಲಿ ಶ್ರೀ ಸಿದ್ಧಗಂಗಾ ಮಠದ ಸಹಾಯದೊಂದಿಗೆ ಹಾಗಲವಾಡಿ ನಾಯಕರ ಬಗೆಗೆ ಎರಡು ದಿನಗಳ ವಿಚಾರ ಸಂಕಿರಣವನ್ನು ನಡೆಸಿದರು. ಇದರ ಫಲಿತಾಂಶವೇ ನಾನು ಅವರ ಶಿಷ್ಯನಾಗಿ ಹಾಗಲವಾಡಿ ನಾಯಕರ ಬಗೆಗೆ ಪಿ.ಹೆಚ್.ಡಿ. ಪದವಿ ಪಡೆಯಲು ಕಾರಣವಾಯಿತು ನಾನು ಬರೆದ ಸಂಶೋಧನಾ ಪ್ರಬಂಧವನ್ನು ಅವರು ಕನ್ನಡ ವಿಶ್ವವಿದ್ಯಾನಿಲಯದ ಕುಲಪತಿಗಳಾಗಿದ್ದಾಗ ತಮ್ಮ ವಿ.ವಿ.ದಿಂದ 1998ರಲ್ಲಿ ಪ್ರಕಟಿಸಿದರು. ಮಧುಗಿರಿ ಅರಸರ ಬಗ್ಗೆ ಆಸಕ್ತಿ ವಹಿಸಿದ್ದ ಅವರು ಕರ್ನಾಟಕ ರಾಜ್ಯ ನೊಳಂಬ ವೀರಶೈವ ಸಂಘದವರ ಆಶ್ರಯದಲ್ಲಿ 1993 ರಲ್ಲಿ ತಿಪಟೂರಿನಲ್ಲಿ ಎರಡು ದಿನಗಳ ವಿಚಾರ ಸಂಕಿರಣ ನಡೆಸಿ, ಆ ಕೃತಿಯನ್ನು ಹೊರತಂದುದೇ ಅಲ್ಲದೆ ಧಾರವಾಡ ವಿಶ್ವವಿದ್ಯಾನಿಲಯದಲ್ಲಿ ತಮ್ಮ ವಿದ್ಯಾರ್ಥಿಯೊಬ್ಬನಿಂದ ಪಿ.ಹೆಚ್.ಡಿ.ಯನ್ನು ಕೂಡ ಮಾಡಿಸಿದರು. ಅನಂತರ ಈ ಅರಸರ ಮೇಲೆ ಬೆಂಗಳೂರು ವಿ.ವಿ.ದಲ್ಲಿ ಮತ್ತೊಂದು ಪಿ.ಹೆಚ್.ಡಿ. ಅಧ್ಯಯನ ನಡೆಯಿತು. ಹೀಗೆ ಈ ಇಬ್ಬರು ಅರಸು ಮನೆತನಗಳ ಬಗೆಗೆ ಅಧ್ಯಯನಕ್ಕೆ ಮಾರ್ಗ ತೋರಿಸಿಕೊಟ್ಟ ಕೀರ್ತಿ ಡಾ.ಎಂ.ಎಂ.ಕಲಬುರ್ಗಿ ಯವರಿಗೆ ಸಲ್ಲುತ್ತದೆ.

ಡಾ.ಎಂ.ಎಂ.ಕಲಬುರ್ಗಿಯವರಿಗೆ ವಿದ್ಯಾರ್ಥಿಗಳು, ಯುವ ಸಂಶೋಧಕರೆಂದರೆ ಅಪಾರವಾದ ಪ್ರೀತಿ. ಎಲ್ಲರನ್ನು ಬೆನ್ನುತಟ್ಟಿ ಪ್ರೋತ್ಸಾಹಿಸುವ ಗುರು ಅವರು. ಅವರು ಕನ್ನಡ ವಿ.ವಿ.ದ ಕುಲಪತಿಗಳಾಗಿದ್ದ ಅವಧಿಯಲ್ಲಿ ಯುವ ಸಂಶೋಧಕರ ತಂಡದ ಮೂಲಕ ಬೆಂಗಳೂರು ವಿ.ವಿ.ಯ ಸಹಕಾರದೊಂದಿಗೆ ತುಮಕೂರಿನಲ್ಲಿ ದಕ್ಷಿಣ ಕರ್ನಾಟಕದ ಅರಸು ಮನೆತನಗಳು ಎಂಬ ಎರಡು ದಿನದ ವಿಚಾರ ಸಂಕಿರಣವನ್ನು ಏರ್ಪಡಿಸಿದರು. ಆ ಸಂಕಿರಣದಲ್ಲಿ ಈ ಜಿಲ್ಲೆಯ ಅನೇಕ ಸಣ್ಣಪುಟ್ಟ ಅರಸರ ಬಗೆಗೆ ಹೊಸ ವಿಷಯಗಳು ಬೆಳಕಿಗೆ ಬಂದವು. ಈ ಎಲ್ಲಾ ಪ್ರಬಂಧಗಳನ್ನು ಅವರು ತಮ್ಮ ವಿ.ವಿ.ದಲ್ಲಿ 2001 ರಲ್ಲಿ ಪ್ರಕಟ ಮಾಡಿಸಿ, ಈ ಜಿಲ್ಲೆಯ ಚರಿತ್ರೆಯನ್ನು ಎತ್ತಿಹಿಡಿದರು. ಈ ಎಲ್ಲ ಸೆಮಿನಾರ್‌ಗಳಲ್ಲಿ ಭಾಗವಹಿಸಿ ನಾನು ಕಲಬುರ್ಗಿ ಸರ್ ಅವರ ಮಾರ್ಗದರ್ಶನದಲ್ಲಿ ಪ್ರಬಂಧಗಳನ್ನು ಸಿದ್ಧಪಡಿಸಿ ಮಂಡಿಸಿದ್ದು ನನ್ನ ಸುಯೋಗವೇ ಆಗಿದೆ. ನನ್ನಂತೆ ಇಲ್ಲಿ ಅನೇಕ ಅವರ ಶಿಷ್ಯ ಸಮೂಹ ಸೇರಿಕೊಂಡಿತು. ಉದಾ: ಡಾ. ಬಿ.ನಂಜುಂಡಸ್ವಾಮಿ, ಡಾ.ಎಸ್.ಪಿ.ಪದ್ಮಪ್ರಸಾದ್,

* ಪ್ರಾಧ್ಯಾಪಕರು, ಶ್ರೀ ಸಿದ್ಧಗಂಗಾ ಮಹಿಳಾ ಕಾಲೇಜು, ಟೌನ್‌ಹಾಲ್ ವೃತ್ತ, ತುಮಕೂರು-572 101.

ಡಾ.ಎನ್.ನಂದೀಶ್ವರ, ಡಾ.ಎಸ್.ಎನ್.ಶಿವರುದ್ರಸ್ವಾಮಿ, ಡಾ.ಎಂ.ವಿ.ವಸು, ಕಾಡಶೆಟ್ಟಿಹಳ್ಳಿ ಸತೀಶ್ ಇತ್ಯಾದಿ.

ಡಾ.ಎಂ.ಎಂ.ಕಲಬುರ್ಗಿಯವರಿಗೆ ಯಾರು ಯಾವ ಕೆಲಸವನ್ನು ಮಾಡಬಹುದು ಎಂಬುದು ಅವರಿಗೆ ಅರಿಯುವ ಸಾಮರ್ಥ್ಯವಿತ್ತು. ಆದ್ದರಿಂದಲೇ ಅವರು ತಾವು ಬರೆದ 'ಕೆಟ್ಟಿತ್ತು ಕಲ್ಯಾಣ' ಎಂಬ ನಾಟಕವನ್ನು ಕಾಡಶೆಟ್ಟಿಹಳ್ಳಿ ಸತೀಶ್ ಅವರಿಂದ ನಿರ್ದೇಶಿಸಿ, ಡಾ.ಗುಬ್ಬಿವೀರಣ್ಣ ಕಲಾಕ್ಷೇತ್ರದಲ್ಲಿ ರಂಗ ಪ್ರಯೋಗ ಮಾಡಿಸಲಾಯಿತು.

ಸಿದ್ಧಗಂಗಾ ಮಠಕ್ಕೂ ಅವರಿಗೂ ನಿಕಟವಾದ ಬಾಂಧವ್ಯವಿತ್ತು. ಅವರು ಆಗಾಗ್ಗೆ ನನ್ನ ಮನೆದೇವರು ಎಡೆಯೂರು ಸಿದ್ಧಲಿಂಗೇಶ್ವರ, ನನ್ನ ಇಷ್ಟದೇವರು ಸಿದ್ಧಗಂಗೆಯ ಶಿವಕುಮಾರೇಶ್ವರ ಎಂದು ಹೇಳುತ್ತಿದ್ದರು. ಮಠದ ಅನೇಕ ಕಾರ್ಯಕ್ರಮಗಳಲ್ಲಿ ಪಾಲ್ಗೊಂಡು ಪರಮಪೂಜ್ಯರಿಂದ ಸನ್ಮಾನವನ್ನು ಸ್ವೀಕರಿಸಿದ್ದಾರೆ. ಒಮ್ಮೆ ಮಠದಲ್ಲಿ ಬಸವಜಯಂತಿ ಸಮಾರಂಭವನ್ನು ಏರ್ಪಡಿಸಿದ್ದರು. ಕಲಬುರ್ಗಿಯವರು ಅಂದಿನ ಉಪನ್ಯಾಸಕರಾಗಿದ್ದರು. ಸಮಾರಂಭದಲ್ಲಿ ಪೂಜ್ಯರು ಸಾನ್ನಿಧ್ಯ ವಹಿಸಿದ್ದರು. ಸಾಮಾನ್ಯವಾಗಿ ಪೂಜ್ಯರು ಅತಿಥಿಗಳ ಮಾತುಗಳ್ನು ಕೇಳಿಸಿಕೊಳ್ಳುತ್ತಾರೆಯೇ ವಿನಃ ಟಿಪ್ಪಣಿ ಮಾಡಿ ಕೊಳ್ಳುವುದಿಲ್ಲ. ಆದರೆ ಕಲಬುರ್ಗಿಯವರು ಉಪನ್ಯಾಸಕ್ಕೆ ನಿಂತ ತಕ್ಷಣ ಪೂಜ್ಯರು ಅವರ ವಿಚಾರಗಳನ್ನು ಟಿಪ್ಪಣಿ ಮಾಡಿಕೊಂಡುದು ಎಲ್ಲರನ್ನು ಚಕಿತಗೊಳಿಸಿತು. ಏಕೆಂದರೆ ಸ್ವಾಮೀಜಿಯವರಿಗೆ ಕಲಬುರ್ಗಿಂಯುವರ ಉಪನ್ಯಾಸದಲ್ಲಿ ಹೊಸ ಸುಳುಹುಗಳಿರುತ್ತಿದ್ದವು. ಎಂಬುದು ಗೊತ್ತಿತ್ತು. ಇದೇ ರೀತಿ ಎಸ್.ಐ.ಟಿ.ಯಲ್ಲಿಯೂ ಕೂಡಾ ಬಸವ ಜಯಂತಿ ಕಾರ್ಯಕ್ರಮದಲ್ಲಿ ಕಲಬುರ್ಗಿಯವರ ಉಪನ್ಯಾಸ ದಲ್ಲಿ ಸ್ವಾಮೀಜಿ ಟಿಪ್ಪಣಿ ಮಾಡಿಕೊಳ್ಳುತ್ತಿದ್ದದನ್ನು ನೆನೆಪಿಸಿ ಕೊಳ್ಳುತ್ತೇನೆ. ಅಂತಹ ಅಗಾಧವಾದ ವಿದ್ವತ್ತನ್ನು ಹೊಂದಿದ್ದ ಕಲಬುರ್ಗಿಯವರ ಬಗೆಗೆ ಸ್ವಾಮೀಜಿಗೂ ಪ್ರೀತಿ ಇತ್ತು. ಇಬ್ಬರೂ ಪರಸ್ಪರ ಭೇಟಿಯಾದಾಗ ಪೂಜ್ಯರು ಅವರೊಂದಿಗೆ ವಚನ ಸಾಹಿತ್ಯ, ಬಸವಣ್ಣನವರ ಬಗೆಗೆ ಚರ್ಚಿಸುತ್ತಿದ್ದರೇ ವಿನಃ ಬೇರೆ ಯಾವ ವಿಷಯಗಳನ್ನು ಹೆಚ್ಚಿಗೆ ಪ್ರಸ್ತಾಪಿಸುತ್ತಿರಲಿಲ್ಲ.

ಇವರು ತುಮಕೂರಿನವರು ಏರ್ಪಡಿಸಿದ್ದ ಅನೇಕ ಬಸವಜಯಂತಿ ಕಾರ್ಯಕ್ರಮಗಳಲ್ಲಿ ಪಾಲ್ಗೊಂಡಿದ್ದಾರೆ. ತುಮಕೂರಿನ ಕರ್ನಾಟಕ ವಿದ್ಯುಚ್ಛಕ್ತಿ ಮಂಡಳಿ 1993 ರಲ್ಲಿ ಸಂಘಟಿಸಿದ್ದ ಸಮಾರಂಭದಲ್ಲಿ ಉಪನ್ಯಾಸ ನೀಡಿದ್ದರು. ತುಮಕೂರಿನ ಇತಿಹಾಸ ಪರಿಷತ್ತನ್ನು ಶ್ರೀ ಸಿದ್ಧಗಂಗಾ ಮಹಿಳಾ ಕಾಲೇಜಿನಲ್ಲಿ ಡಾ. ಶ್ರೀ ಶ್ರೀ ಶಿವಾನಂದ ಶಿವಾಚಾರ್ಯರ ದಿವ್ಯ ಸಾನ್ನಿಧ್ಯದಲ್ಲಿ ಉದ್ಘಾಟಿಸಿ ಉಪನ್ಯಾಸ ನೀಡಿ, ವಿದ್ಯಾರ್ಥಿಗಳಿಗೆ ಸ್ಫೂರ್ತಿ ತುಂಬಿದ್ದರು.

ಡಾ. ಎಂ.ಎಂ.ಕಲಬುರ್ಗಿಯವರು ತುಮಕೂರಿಗೆ ಹೆಚ್ಚು ವಿದ್ವತ್ ಕಾರ್ಯಕ್ರಮಗಳಿಗೆ ಬರುತ್ತಿದ್ದರೇ ಹೊರತು ಬೇರೆ ಯಾವ ಶಾಲಾ ಕಾಲೇಜುಗಳ ಸಮಾರಂಭಕ್ಕೆ ಆಹ್ವಾನಿಸಿದರೂ ಬರಲು ಇಷ್ಟಪಡುತ್ತಿರಲಿಲ್ಲ. 2013 ರಲ್ಲಿ ಡಾ.ಎಸ್.ಸಿ.ಶರ್ಮಾರವರು ತುಮಕೂರು ವಿ.ವಿ. ಉಪಕುಲಪತಿಗಳಾಗಿದ್ದ ಸಂದರ್ಭದಲ್ಲಿ ಕುಮಾರವ್ಯಾಸ ಭಾರತದ ಬಗ್ಗೆ ವಿಚಾರ ಸಂಕಿರಣ ಏರ್ಪಡಿಸಿದ್ದರು. ಅಂದು ಸಮಾರೋಪ ಭಾಷಣವನ್ನು ಮಾಡಿದ್ದ ಎಂ.ಎಂ.ಕಲಬುರ್ಗಿ ಯವರ ಮಾತುಗಳು ಕೃತಿಗೆ ಹೊಸ ಭಾಷ್ಯ ಬರೆದಂತಿದ್ದವು. ಅದೇ ಅವರ ತುಮಕೂರಿನ ಕೊನೆಯ ಕಾರ್ಯಕ್ರಮ ವಾಗಿದ್ದು ದುರ್ದೈವದ ಸಂಗತಿಯಾಗಿದೆ. ನಾನು ನಮ್ಮ ಕಾಲೇಜಿನಲ್ಲಿ ಕನ್ನಡ ಕಾವ್ಯಗಳಲ್ಲಿ ಚಾರಿತ್ರಿಕ ಅಂಶಗಳು ಎಂಬ ವಿಚಾರ ಸಂಕಿರಣವನ್ನು ಜನವರಿ ತಿಂಗಳಿನಲ್ಲಿ ಏರ್ಪಡಿಸಲು ಸಿದ್ಧತೆ ನಡೆಸಿದ್ದಾಗ ಅವರು ದಿಕ್ಸೂಚಿ ಭಾಷಣ ಮಾಡಲು ಒಪ್ಪಿದ್ದರು. ಆದರೆ ವಿಧಿ ಅವರನ್ನು ತನ್ನತ್ತ ಸೆಳೆದುಕೊಂಡಿತು. ಅವರ ಜೊತೆ ಸಂಶೋಧನಾ ಕ್ಷೇತ್ರಕಾರ್ಯಕ್ಕೆ ಹೋಗುವುದೆಂದರೆ ಜೊತೆಯಲ್ಲಿ ನಡೆದಾಡುವ ವಿಶ್ವಕೋಶವನ್ನು ಇಟ್ಟುಕೊಂಡಂತೆ. ತಲಸ್ಪರ್ಶಿ ಅಧ್ಯಯನಕ್ಕೆ ಆದ್ಯತೆ ನೀಡುತ್ತಿದ್ದ ಅವರು ಮುಖ್ಯ ವಿಚಾರಗಳು ತೇಲುತ್ತಿರಬೇಕು, ಸಂಶೋಧನೆಯಲ್ಲಿ ನಿಖರತೆ, ವಸ್ತುನಿಷ್ಠತೆ ಇರಬೇಕು. ಸತ್ಯ ಹೇಳಲು ಹಿಂಜರಿಯಬಾರದು, ಪೂರ್ವಾಗ್ರಹ ಪೀಡಿತರಾಗಿ ಸಂಶೋಧನೆ ಮಾಡಿದರೆ ಸಮಾಜಕ್ಕೆ ಅನ್ಯಾಯ ಮಾಡಿದಂತಾಗುತ್ತದೆ ಎಂಬ ಪಾಠಗಳನ್ನು ಹೇಳುತ್ತಿದ್ದ ನನ್ನ ಮಾಸ್ತರು ಮತ್ತೊಮ್ಮೆ ಹುಟ್ಟಿಬರಲಿ.





# ಶರಣರು

**1. 'ಶರಣ' ಶಬ್ದದ ಅರ್ಥವೇನು ?**
ಗುರು–ಲಿಂಗ–ಜಂಗಮದಲ್ಲಿ ನಿಷ್ಠೆಯುಳ್ಳವನು; ಕಾಯಕ ದಾಸೋಹಗಳಲ್ಲಿ ಶ್ರದ್ಧೆಯುಳ್ಳವನು.

**2. 'ಶರಣರು' ಶಬ್ದ ಹೆಚ್ಚು ಪ್ರಚಲಿತವಾದುದು ಯಾವಾಗ?**
ಹನ್ನೆರಡನೆಯ ಶತಮಾನದಲ್ಲಿ

**3. ಪುರುಷರಿಗೆ ಶರಣರೆಂದರೆ ಸ್ತ್ರೀಯರಿಗೆ ಏನೆಂದು ಕರೆಯುತ್ತಾರೆ ?**
ಶರಣೆಯರು.

**4. ಶರಣರು ನಡೆಸಿದ ಆಂದೋಲನದ ಸ್ವರೂಪವೇನು ?**
ಇಷ್ಟಲಿಂಗ ಧಾರಣೆ, ಆಧ್ಯಾತ್ಮಿಕ ಸಾಧನೆ, ಸರ್ವಸಮಾನತೆ, ಶ್ರಮದ ದುಡಿಮೆ, ಅನ್ಯಾಯದ ವಿರುದ್ಧ ಹೋರಾಟ.

**5. ಶರಣ ಆಂದೋಲನದ ಮುಖಂಡನಾರು ?**
ಬಸವಣ್ಣ.

**6. ಶರಣರು ಮಹತ್ವಕೊಟ್ಟ ಮೂರು ತತ್ವಗಳಾವುವು ?**
ಗುರು, ಲಿಂಗ ಮತ್ತು ಜಂಗಮ.

**7. ಶರಣರು ವೃತ್ತಿಗೆ ಕೊಟ್ಟ ಹೆಸರೇನು ?**
ಕಾಯಕ.

**8. ಶರಣರು ಪ್ರಸಾದ ಸೇವೆಗೆ ಏನೆಂದು ಕರೆದರು ?**
ದಾಸೋಹ

**9. ಕಾಯಕಕ್ಕೆ ನೀಡಿದ ಮುಖ್ಯವಿಶೇಷಣಗಳಾವುವು?**
ಸತ್ಯ, ಶುದ್ಧ.

**10. ಶರಣರು ನಡೆಸಿದ ಮೂರು ಮುಖ್ಯ ಕ್ರಾಂತಿಗಳಾವುವು?**
ಧಾರ್ಮಿಕ ಕ್ರಾಂತಿ, ಸಾಮಾಜಿಕ ಕ್ರಾಂತಿ ಮತ್ತು ಸಾಹಿತ್ಯಿಕ ಕ್ರಾಂತಿ.

**11. ಶರಣರು ಯಾವುದರ ವಿರುದ್ಧ ಸಿಡಿದೆದ್ದರು ?**
ಅರ್ಥಹೀನ ಸಂಪ್ರದಾಯ, ಅಂಧಶ್ರದ್ಧೆ, ಶೋಷಣೆ, ಸಾಮಾಜಿಕ ಅಸಮಾನತೆ, ದೇವಾಲಯ ಸಂಸ್ಕೃತಿ ಮತ್ತು ಪುರೋಹಿತಶಾಹಿ.

**12. ಶರಣರು ವೇದಾಗಮಗಳ ವಿರೋಧಿಗಳೆ?**
ಅಲ್ಲ. ಆದರೆ ಅವುಗಳಲ್ಲಿದ್ದ ದೋಷಗಳ ವಿರುದ್ಧ ದನಿ ಎತ್ತಿದರು. ಅಂತಹ ದೋಷದ ಭಾಗಗಳನ್ನು ನಿಷ್ಠುರವಾಗಿ ನಿರಾಕರಿಸಿದರು.

**13. ಶರಣ ಚಳವಳಿಗೆ ವಿರೋಧವಾಗಿದ್ದವರು ಯಾರು?**
ಸಂಪ್ರದಾಯವಾದಿ ವೈದಿಕರು ಮತ್ತು ಪಟ್ಟಭದ್ರ ಹಿತಾಸಕ್ತಿಗಳು

**14. ಶರಣ ಚಳವಳಿಯ ಕೇಂದ್ರಸ್ಥಳ ಯಾವುದು?**
ಕರ್ನಾಟಕ ಬೀದರ ಜಿಲ್ಲೆಯ ಕಲ್ಯಾಣ. ಅದನ್ನೀಗ 'ಬಸವ ಕಲ್ಯಾಣ' ಎಂದು ಕರೆಯಲಾಗಿದೆ.

**15. ಶರಣರು ಆಸ್ತಿಕರೆ ಅಥವಾ ನಾಸ್ತಿಕರೆ ?**
ಪೂರ್ಣ ಆಸ್ತಿಕರು ; ಏಕದೇವೋಪಾಸಕರು

**16. ಶರಣರ ಉಪಾಸನಾ ಮಾಧ್ಯಮ ಯಾವುದು ?**
ಇಷ್ಟಲಿಂಗ.

**17. ಇಷ್ಟಲಿಂಗ ಸ್ಥಾವರವೆ ?**
ಅಲ್ಲ. ಅದನ್ನು ವಿಶ್ವಚೈತನ್ಯದ ಕುರುಹಾಗಿ ಗುರು ಕರುಣಿಸಿದ ಕರಸ್ಥಲದ ಚುಳುಕೆಂದು ಶರಣರು ಭಾವಿಸಿದ್ದಾರೆ.

**18. ಶರಣರ ದೃಷ್ಟಿಯಲ್ಲಿ ಕೈಲಾಸವೆಂದರೆ ಯಾವುದು ?**
ಕಾಯ ಮತ್ತು ಕಾಯಕ.

**19. ಶರಣರು ಮರಣಕ್ಕೆ ಏನೆಂದು ಕರೆದರು ?**
ಮಹಾನವಮಿ.

**20. ಎಲ್ಲ ಶರಣರೂ ಕಲ್ಯಾಣದವರೆ ?**
ಅಲ್ಲ. ದೇಶದ ನಾನಾ ಭಾಗಗಳಿಂದ ಬಂದು ಕಲ್ಯಾಣದಲ್ಲಿ ನೆಲೆಸಿದವರು. ಕೆಲವರು ಕಲ್ಯಾಣದಿಂದ ಹೋಗಿ ಬೇರೆ ಕಡೆಯೂ ನೆಲೆಸಿದರು.

**21. ಆದರ್ಶ ಶರಣ ದಾಂಪತ್ಯಕ್ಕೆ ನಾಲ್ಕು ಉದಾಹರಣೆ ಕೊಡಿ.**
ಮೋಳಿಗೆ ಮಾರಯ್ಯ–ಮಹಾದೇವಿ
ಆಯ್ದಕ್ಕಿ ಮಾರಯ್ಯ– ಲಕ್ಕಮ್ಮ
ಹಡಪದ ಅಪ್ಪಣ್ಣ–ಲಿಂಗಮ್ಮ
ಉರಿಲಿಂಗಪೆದ್ದಿ– ಕಾಳವ್ವೆ.

**22. ಶಿವಯೋಗಿಗಳಾಗಿದ್ದ ಶರಣರಾರು?**
ಅಲ್ಲಮಪ್ರಭು, ಸಿದ್ಧರಾಮ, ಚನ್ನಬಸವಣ್ಣ, ಉರಿಲಿಂಗದೇವ ಮುಂತಾದವರು.

**23. ಶರಣರು ಭಕ್ತ–ದೇವರ ಸಂಬಂಧವನ್ನು ಹೇಗೆ ಪರಿಭಾವಿಸುತ್ತಾರೆ ?**
'ಶರಣಸತಿ–ಲಿಂಗಪತಿ' ಎಂಬ ಭಾವದಿಂದ.

**24. ಶರಣರ ಆಂದೋಲನ ನಡೆದಾಗ ಕಲ್ಯಾಣದಲ್ಲಿ ಆಳುತ್ತಿದ್ದ ಅರಸು ಮನೆತನ ಯಾವುದು ? ಅರಸ ಯಾರು?**
ಕಳಚುರ್ಯರ ಮನೆತನ. ಅರಸು – ಬಿಜ್ಜಳ.

**25. ಶರಣರ ಸಂಗದ ಮಹತ್ವವನ್ನು ತಿಳಿಸುವ ಅಕ್ಕ ಮಹಾದೇವಿಯ ಒಂದು ವಚನ ಹೇಳಿ.**
ಅರಿಯದವರೊಡನೆ ಸಂಗವ ಮಾಡಿದಡೆ
ಕಲ್ಲ ಹೋಯ್ದು ಕಿಡಿಯ ತೆಗೆದುಕೊಂಬಂತೆ
ಬಲ್ಲವರೊಡನೆ ಸಂಗವ ಮಾಡಿದಡೆ
ಮೊಸರ ಹೊಸೆದು ಬೆಣ್ಣೆಯ ತೆಗೆದುಕೊಂಬಂತೆ
ಚೆನ್ನಮಲ್ಲಿಕಾರ್ಜುನಯ್ಯ, ನಿಮ್ಮ ಶರಣರ ಸಂಗವ
ಮಾಡಿದಡೆ ಕರ್ಪೂರದ ಗಿರಿಯನುರಿಕೊಂಬಂತೆ!

**26. ಶರಣರು ಧಾರ್ಮಿಕ ವಿಚಾರಗಳನ್ನು ಚರ್ಚಿಸುತ್ತಿದ್ದ ಸ್ಥಳಕ್ಕೆ ಏನೆನ್ನುತ್ತಾರೆ ?**
ಅನುಭವ ಮಂಟಪ

**27. ಶರಣರದು ಒಂದು ಜಾತಿಯೆ ?**
ಅಲ್ಲ ; ಬೇರೆ ಬೇರೆ ಕುಲ–ಜಾತಿಗಳಿಗೆ, ವರ್ಗ–ವೃತ್ತಿಗಳಿಗೆ ಸೇರಿದವರೆಲ್ಲ ತಮ್ಮ ಪೂರ್ವ ಭೇದಗಳನ್ನು ಕಳೆದುಕೊಂಡು ಸರ್ವಸಮಾನರಾಗಿ ಬಾಳಿದ ಸಮೂಹ.

**28. ಶರಣರೆಲ್ಲ ವಚನಕಾರರೆ?**
ಅಲ್ಲ. ಆದರೆ ಅವರೆಲ್ಲ ಶರಣಮಾರ್ಗದಲ್ಲಿ ನಡೆಯುತ್ತಿದ್ದವರು.

**29. ಶರಣದ ಧರ್ಮದ ಅಂಗೀಕಾರಕ್ಕೆ ವಿಧಿಸಿದ್ದ ನಿಯಮವೇನು?**
ಇಷ್ಟಲಿಂಗ ಧಾರಣೆ.

**30. ಶರಣರು 'ಭವಿ'–'ಭಕ್ತ' ಎಂದು ಕರೆದಿರುವುದು ಯಾರನ್ನು ?**
ಇಷ್ಟಲಿಂಗ ನಿಷ್ಠೆ ಎಂದರೆ ದೈವಭಕ್ತಿ ಇದ್ದವನನ್ನು ಭಕ್ತ ಎಂದಿದ್ದಾರೆ; ಅದಿಲ್ಲದವನನ್ನು ಭವಿ ಎಂದು ಕರೆದಿದ್ದಾರೆ.

**31. ಶರಣರು ಪರಸ್ಪರ ಭೇಟಿಯಾದಾಗ ಹೇಗೆ ಪ್ರತಿಕ್ರಿಯಿಸುತ್ತಿದ್ದರು?**
ಉಭಯರೂ ಶಿರಬಾಗಿ, ಕೈಮುಗಿದು 'ಶರಣು ಶರಣಾರ್ಥಿ' ಎನ್ನುತ್ತಿದ್ದರು.

## ಶರಣ ಕ್ಷೇತ್ರಗಳು

**32. 'ಕ್ಷೇತ್ರ' ಎಂದರೇನು ?**
ಭೂಮಿ, ಸ್ಥಳ, ಪ್ರದೇಶ, ಸಿದ್ಧಸ್ಥಳ ಎಂದೆಲ್ಲ ಅರ್ಥಗಳಿವೆ.

**33. 'ಶರಣಕ್ಷೇತ್ರ'ವೆಂದು ಯಾವುದನ್ನು ಕರೆಯುತ್ತೇವೆ.**
ಶರಣರ ಜನ್ಮ ಅಥವಾ ಐಕ್ಯಸ್ಥಳ ಅಥವಾ ಅವರ ಕಾರ್ಯ ಚಟುವಟಿಕೆಗಳಿಗೆ ಸಂಬಂಧಿಸಿದ ಸ್ಥಳಕ್ಕೆ.

**34. ಪುರಾಣಗಳು ಹೇಳುವ ಪುಣ್ಯಕ್ಷೇತ್ರ–ತೀರ್ಥಕ್ಷೇತ್ರಗಳ ಬಗೆಗೆ ಶರಣರ ಅಭಿಪ್ರಾಯವೇನು ?**
ದೇವಲೋಕ ಮರ್ತ್ಯಲೋಕವೆಂಬುದು ಬೇರೆ ಮತ್ತೊಂದುಂಟೆ? ಲೋಕದೊಳಗೆ ಅನಂತಲೋಕ ಶಿವಲೋಕ ಶಿವಾಚಾರವಯ್ಯಾ ಶಿವಭಕ್ತನಿದ್ದ ಠಾವೆ ದೇವ ಲೋಕ, ಭಕ್ತನಂಗಳವೆ ವಾರಣಾಸಿ ಕಾಯವೆ ಕೈಲಾಸ, ಇದು ಸತ್ಯ ಕೂಡಲಸಂಗಮದೇವಾ – ಬಸವಣ್ಣ.

**35. ಕನ್ನಡ ನಾಡಿನಲ್ಲಿರುವ ಪ್ರಸಿದ್ಧ ಶರಣಕ್ಷೇತ್ರಗಳಾವುವು?**
ಬಸವನ ಬಾಗೇವಾಡಿ, ಇಂಗಳೇಶ್ವರ, ಕೂಡಲಸಂಗಮ, ಉಳವಿ, ಬಸವಕಲ್ಯಾಣ, ಬನವಾಸಿ, ಬಳ್ಳಿಗಾವೆ, ಉಡುತಡಿ, ಸೊನ್ನಲಿಗೆ(ಸೊಲ್ಲಾಪುರ) ಮುದನೂರು ಇತ್ಯಾದಿ.

**36. ಬಸವಕಲ್ಯಾಣದಲ್ಲಿ ಇರುವ ಐತಿಹಾಸಿಕ ಕುರುಹುಗಳಾವುವು ?**
ಅರಿವಿನ ಮನೆ, ಪರುಷಕಟ್ಟೆ, ಪ್ರಭುವಿನ ಗವಿ, ಮಹಾಮನೆ, ಮಾಚಿದೇವರ ಹೊಂಡ, ತ್ರಿಪುರಾಂತಕ ಕೆರೆ, ಬಿಜ್ಜಳನ ಅರಮನೆ, ಬಂದವರ ಓಣಿ, ನೀಲಮ್ಮನ ಗವಿ ಇತ್ಯಾದಿ.

**ಕೃಪೆ : ಶರಣ ಕಿರಣ**
**ಲೇಖಕರು : ಗೊ.ರು.ಚೆನ್ನಬಸಪ್ಪ,**
**ಟಿ.ಆರ್. ಮಹಾದೇವಯ್ಯ**





# ರೋಗಕ್ಕೆ ರಾಮಬಾಣ ಎಕ್ಕೆ
# Calotrpis procéra, R.Br. Asclepiadaceae

– ಡಾ॥ ಶೈಲೇಶ್ ಎಂ.ಡಿ. *

**ಶ**ಬ್ದವ್ಯುತ್ಪತ್ತಿಯ ಪ್ರಕಾರ 'ಅರ್ಕ' ಎಂದರೆ 'ಪೂಜಿಸಬೇಕು' ಎಂದರ್ಥ. ವೇದದ ಪ್ರಕಾರ ಅಂಗೀರಸ ಮಹರ್ಷಿಯು ಆಡಿನಲ್ಲಿ ಸ್ವರ್ಗಲೋಕಕ್ಕೆ ಹೋಗುತ್ತಿರುವಾಗ, ಅಂಗೀರಸನ ಬೆವರು ಆಡಿನ ಮೇಲೆ ಬಿತ್ತು. ಆ ಆಡು ಬೇರೆ ಬೇರೆ ಸಸ್ಯದ ಎಲೆಯನ್ನು ತಗಿದಾಗ ಅದು 'ಅರ್ಕ' (ಎಕ್ಕೆ) ಗಿಡವಾಗಿ ಪರಿವರ್ತನೆಗೊಂಡಿತು ಎಂಬ ಕಥೆ ಇದೆ. ಚರಕನು ಎಕ್ಕೆಯನ್ನು 'ಕ್ಷೀರಿ' ದ್ರವ್ಯದಲ್ಲಿ ವಿವರಿಸಿದ್ದಾನೆ. ಸುಶ್ರುತ ಮತ್ತು ವಾಗ್ಭಟ ಈ ದ್ರವ್ಯವನ್ನು 'ಅರ್ಕಾದಿ' ಗಣದಲ್ಲಿ ವಿವರಿಸಿದ್ದಾರೆ. ಬಿಳಿ ಎಕ್ಕಗಿಡದ ಪೂಜೆಯನ್ನು ಮಾಡಿದರೆ ಸೂರ್ಯನನ್ನು ಪೂಜಿಸಿದ ಫಲ ಸಿಗುತ್ತದೆ ಎಂಬ ವ್ಯಾಖ್ಯಾನವು ಇದೆ. ಅದಕ್ಕಾಗಿಯೋ ಏನೋ ಈ ದ್ರವ್ಯವನ್ನು ನವಗ್ರಹಗಳು ಪೂಜಿಸುವ ಸ್ಥಳದಲ್ಲಿ ಬೆಳೆಸುತ್ತಾರೆ.

**ಬಹು ಭಾಷಾ ಹೆಸರುಗಳು :**

| | | |
|---|---|---|
| ಕನ್ನಡ | : | ಎಕ್ಕೆ |
| ಸಂಸ್ಕೃತ | : | ಅರ್ಕ |
| ಹಿಂದಿ | : | ಮಥಾರ್, ಅರ್ಕ್ |
| ಇಂಗ್ಲಿಷ್ | : | ಮಥಾರ್ |
| ತುಳು | : | ಎಕ್ಕೆ |

**ಪರ್ಯಾಯ ಪದಗಳು :**

ಅರ್ಕ, ಅಲರ್ಕ, ಮಂದಾರ, ಸದಾಪುಷ್ಪ, ತೂಲಫಲ, ಕ್ಷೀರಪರ್ಣ, ಅರ್ಕಪರ್ಣ, ವಿಕಿರಣ, ಅಸ್ಫೋಟ, ಭಾನು, ಭಾಸ್ಕರ, ರವಿ, ಸೂರ್ಯ, ಪುಷ್ಪಕ, ಕ್ಷೀರದಳ, ಕ್ಷೀರಕಾಂಡಕ, ಕ್ಷೀರಪರ್ಣಿ, ರೂಪೋಕಾ, ಅರ್ಕನಾಮ. ಅಂಗಾಂಗಗಳು, ತನುಮನಗಳಲ್ಲಿ ತೇಜಸ್ಸನ್ನು ಪ್ರಜ್ವಲಿಸುವ ಗುಣವು ಈ ದ್ರವ್ಯದಲ್ಲಿ ಇರುವುದರಿಂದ ಇದನ್ನು ಸೂರ್ಯನ ಹೆಸರಾದ 'ರವಿ', 'ಭಾಸ್ಕರ' ಮುಂತಾದ ಹೆಸರಿನಿಂದ ಕರೆದಿರ ಬಹುದು. ಎಲೆಯಲ್ಲಿ ಬಿಳಿಬಣ್ಣದ ದ್ರವ ಪದಾರ್ಥ ಹೊರ ಬರುವುದರಿಂದ ಇದನ್ನು 'ಕ್ಷೀರಪರ್ಣ' ಎಂದು ಕರೆಯುತ್ತಾರೆ.

**ದ್ರವ್ಯದ ವರ್ಣನೆ :**

ಎಕ್ಕವು ಒಂದು ಕುರುಚಲ ಗಿಡ. ಇದು ಪೂರ್ಣ ಬೆಳೆದಾಗ ಸುಮಾರು ಮೂರರಿಂದ ಐದು ಅಡಿ ಎತ್ತರದವರೆಗೆ ಬೆಳೆಯುತ್ತದೆ. ಮರುಭೂಮಿ ಪ್ರದೇಶದಲ್ಲಿಯೂ ಸಹ ಇದು ವರ್ಷಗಟ್ಟಲೆ ಬೆಳೆಯುವ ಸಸ್ಯ. ಎಲೆಯು ೧೦–೧೫ ಸೆಂ.ಮೀ. ಉದ್ದವಾಗಿ ಮತ್ತು ೨.೫೮ ಸೆಂ.ಮೀ. ಅಗಲವಾಗಿದೆ. ಎಲೆಯು ದೊಡ್ಡದಾಗಿ ಅಂಡಾಕಾರದಿಂದ ಕೂಡಿದ್. ಎಕ್ಕ ಗಿಡದ ಅಂಗಗಳ ಮೇಲೆ ಚಿಕ್ಕ ಚಿಕ್ಕ ಬಿಳಿಯ ರೋಮಗಳಿರುತ್ತದೆ. ಎಲೆ, ಹೂವು ಮತ್ತು ಕಾಂಡ ದಲ್ಲಿ ಬಿಳುಪಾದ ದ್ರವ ಪದಾರ್ಥವು ಹೊರಬರುತ್ತದೆ. ಎಲೆಯ ಕಂಕುಳಲ್ಲಿ ಮತ್ತು ಕಾಂಡದ ತುದಿಯಲ್ಲಿ ಹೂಗಳು ಗೊಂಚಲಾಗಿ ಬಿಡುತ್ತದೆ. ಜೋಡಿ ಕಾಯಿಗಳು ಹೂವಿನ ತೊಟ್ಟಿನ ಮೇಲೆ ಕಾಣಸಿಗುತ್ತದೆ. ಕಾಯಿಯಲ್ಲಿ ಬೀಜಗಳಿರುತ್ತವೆ. ರೇಷ್ಮೆಯಂತಹ ಕೂದಲು ಬೀಜದ ತುದಿಯಲ್ಲಿ ಇರುವುದರಿಂದ ಬೀಜಗಳು ಗಾಳಿಯ ಸಹಾಯದಿಂದ ಒಂದು ಕಡೆಯಿಂದ ಇನ್ನೊಂದು ಕಡೆಗೆ ಪ್ರಸಾರವಾಗುತ್ತದೆ. ಸಾಮಾನ್ಯವಾಗಿ ಭಾರತದೆಲ್ಲೆಡೆ ಬೆಳೆಯುವ ಈ ಸಸ್ಯವು ಹೆಚ್ಚಾಗಿ ಬಿಸಿ ಮತ್ತು ಒಣಪ್ರದೇಶದಲ್ಲಿ ಬೆಳೆಯುತ್ತದೆ. ಈ ದ್ರವ್ಯವು ಹೂವು ಮತ್ತು ಕಾಯಿಯನ್ನು ಚಳಿಗಾಲದದಿಂದ ಬೇಸಿಗೆಕಾಲದ ನಡುವೆ ಬಿಡುತ್ತದೆ.

**ವಿಧಗಳು :** ಎಕ್ಕದ ಗಿಡದಲ್ಲಿ ಎರಡು ಪ್ರಭೇದಗಳಿವೆ.

೧. ಬಿಳಿ ಎಕ್ಕ (C. Procera)

೨. ನೀಲಿ ಮಿಶ್ರಿತ ಕೆಂಪು ಎಕ್ಕ (C. gigantia)

ಬಿಳಿ ಎಕ್ಕವನ್ನು ಸಂಸ್ಕೃತದಲ್ಲಿ 'ಅರ್ಕ' ಎಂದೂ ಮತ್ತು ನೀಲಿ ಮಿಶ್ರಿತ ಕೆಂಪು ಎಕ್ಕವನ್ನು 'ರಾಜರ್ಕ' ಎಂದು ಕರೆಯುತ್ತಾರೆ.

**ಉಪಯುಕ್ತ ಅಂಗಗಳು :**

* ಬೇರಿನ ತೊಗಟೆ * ಲೇಟೆಕ್ಸ್(ಹಾಲಿನಂಥ ದ್ರವಪದಾರ್ಥ)
* ಹೂವು * ಎಲೆ * ಕ್ಷಾರ

* ಆಳ್ವಾಸ್ ಆಯುರ್ವೇದಿಕ್ ಮೆಡಿಕಲ್ ಕಾಲೇಜು, ಮೂಡಬಿದರೆ, ಮಂಗಳೂರು.

### ದ್ರವ್ಯದ ಗುಣಧರ್ಮಗಳು :

ರಸ : ಕಟು, ತಿಕ್ತ

ಗುಣ : ಲಘು, ರೂಕ್ಷ, ತೀಕ್ಷ್ಣ

ವೀರ್ಯ : ಉಷ್ಣ

ವಿಪಾಕ : ಕಟು

ಕರ್ಮ : ವಾತಹರ, ರೇಚನ, ವಿಷಘ್ನ, ದೀಪನ,

*ಕ್ಷೀರಮರ್ಕಸ್ಯ ತಿಕ್ತೋಷ್ಣಂ ಸ್ನಿಗ್ಧಂ ಸಲವಣಂ ಲಘು ।*
*ಕುಷ್ಠಗುಲ್ಮೋದರಹರಂ ಶ್ರೇಷ್ಠಮೇತತ್ ವಿರೇಚನಂ ॥*

(ಭಾವಪ್ರಕಾಶ)

ಎಕ್ಕದ ಕ್ಷೀರ ತಿಕ್ತ ಮತ್ತು ಲವಣ ರಸದಿಂದ ಕೂಡಿದೆ. ಲಘು ಮತ್ತು ಸ್ನಿಗ್ಧಂ ಗುಣದಿಂದ ಕೂಡಿದೆ. ಕುಷ್ಠ, ಗುಲ್ಮ, ಉದರರೋಗಗಳನ್ನು ನಿವಾರಿಸುತ್ತದೆ. ವಿರೇಚನಕ್ಕೆ ಶ್ರೇಷ್ಠವಾಗಿದೆ.

### ಔಷಧಿ ಪ್ರಮಾಣ :

| | |
|---|---|
| ಬೇರಿನ ತೊಗಟೆ ಚೂರ್ಣ | : ೦೫-೧ ಗ್ರಾಂ. |
| ಹೂವಿನ ಚೂರ್ಣ | : ೧-೩ಗ್ರಾಂ |
| ಲೇಟೆಕ್ಸ್ | : ೨೫೦-೫೦೦ ಮಿ.ಗ್ರಾಂ |
| ಪತ್ರ ಚೂರ್ಣ | : ೨ ರತ್ತಿ |
| ವಮನಕ್ಕೆ | : ೧೫-೧೬ ರತ್ತಿ |

### ಔಷಧೀಯ ಯೋಗಗಳು :

* ಅರ್ಕಲವಣ * ಅರ್ಕೇಶ್ವರ
* ಅರ್ಕತೈಲ * ಅರ್ಕಮನಶೀಲಾದಿ ಧೂಮ
* ಅರ್ಕವಟಿ * ರವಿಮೂಲಾದಿ ವಟಿ

### ಔಷಧೀಯ ಉಪಯೋಗಗಳು :

* ಸೌವರ್ಚಲವಣ, ಎಕ್ಕೆಯ ಹೂವು ಮತ್ತು ಕರಿಮೆಣಸಿನ ಸಮಪ್ರಮಾಣದ ಚೂರ್ಣವನ್ನು ಒಟ್ಟಿಗೆ ಬೆರೆಸಿ ೧೨೫ ಮಿ.ಗ್ರಾಂ. ನಷ್ಟು ದೊಡ್ಡದಾದ ಮಾತ್ರೆ ಮಾಡಿ ಸೇವಿಸುವು ದರಿಂದ ಹಸಿವಿಲ್ಲದಿರುವಿಕೆಗೆ ಒಳ್ಳೆಯದು.
* ಎಕ್ಕೆಯ ಬೇರು ಮತ್ತು ಶಮಿ ಸಸ್ಯದ ಬೇರಿನ ಹೊಗೆಯನ್ನು ಮೂಲವ್ಯಾಧಿಗೆ ಬಿಡುವುದರಿಂದ ಮೂಲವ್ಯಾಧಿ ನಿವಾರಣೆ. * ಅರ್ಕ ಲೇಟೆಕ್ಸ್, ಸಮುದ್ರ ಲವಣವನ್ನು ಬೆರೆಸಿ ಹಾಲಿ ನೊಂದಿಗೆ ಸೇವಿಸುವುದರಿಂದ ಗಂಟಲುರೋಗ ನಿವಾರಣೆ.
* ಎಕ್ಕೆಯ ಬೇರಿನ ತೊಗಟೆಗೆ ಗಂಜಿಯನ್ನು ಬೆರೆಸಿ ಲೇಪಮಾಡಿ ಹಚ್ಚುವುದರಿಂದ ಆನೆಕಾಲು ರೋಗ ನಿವಾರಣೆ.
* ಎಕ್ಕೆಯ ಎಲೆಯ ರಸ, ಸಾಸಿವೆಣ್ಣೆ ಮತ್ತು ಹಳದಿಯ ಲೇಪ ಬೆರೆಸಿ ತಯಾರಿಸಿದ ತೈಲವನ್ನು ಹಚ್ಚಿದರೆ ಚರ್ಮ ರೋಗ ನಿವಾರಣೆ.
* ಎಕ್ಕೆಯ ಎಲೆಯಿಂದ ಗಾಯವನ್ನು ಮುಟ್ಟುವುದರಿಂದ ಗಾಯವು ನಿವಾರಣೆ.
* ಎಕ್ಕೆಯ ಬಲಿತ ಎಲೆಗೆ ತುಪ್ಪ ತಾಗಿಸಿ ಅದನ್ನು ಬೆಂಕಿಯಲ್ಲಿ ಬಿಸಿ ಮಡಿ, ಹಿಂಡಿದಾಗ ಬಂದ ರಸವನ್ನು ಕಿವಿಗೆ ತೊಟ್ಟು ತೊಟ್ಟಾಗಿ ಬಿಡುವುದರಿಂದ ಕಿವಿನೋವು ನಿವಾರಣೆ.
* ಎಕ್ಕದ ಬೇರಿನ ಚೂರ್ಣಕ್ಕೆ ನಿಂಬೆ ರಸ ಸೇರಿಸಿ ೦.೫-೧ ಗ್ರಾಂನಷ್ಟು ಸೇವಿಸುವುದರಿಂದ ಸರ್ವವಿಧದ ಜ್ವರ ನಿವಾರಣೆ.

**ಎಚ್ಚರಿಕೆ :** ಎಕ್ಕೆಯ ಅತಿಯಾದ ಸೇವನೆಯಿಂದ ಆರೋಗ್ಯಕ್ಕೆ ಹಾನಿಯುಂಟಾಗಬಹುದು. ಆದ್ದರಿಂದ ಸೂಕ್ತ ವೈದ್ಯರ ಸಲಹೆ ಪಡೆದೇ ಅದನ್ನು ಸೇವಿಸಬೇಕು. ಎಕ್ಕೆಯ ಉತ್ತಮ ಫಲಿತಾಂಶಕ್ಕಾಗಿ ಅಥವಾ ಎಕ್ಕೆಯನ್ನು ಹೊಟ್ಟೆಗೆ ಸೇವಿಸುವ ಮೊದಲು ಎಕ್ಕೆಯ ಭಾಗವನ್ನು ನೆರಳಿನಲ್ಲಿ ಒಣಗಿಸಿ, ಅದನ್ನು ಚೂರ್ಣ ಮಾಡಿ, ಅದಕ್ಕೆ ೭ ಸಲ ಹಸುವಿನ ಹಾಲಿನಲ್ಲಿ ಮತ್ತು ೭ ಸಲ ಎಮ್ಮೆ ಹಾಲಿನಲ್ಲಿ ಭಾವನೆಕೊಟ್ಟು ನಂತರ ಉಪಯೋಗಿಸಬೇಕು.









# ಕಾಲು ಒಡೆಯುವುದು (Kibes)

– ಜಿ.ವಿ. ವೆಂಕಟನಾರಾಯಣ ಶಾಸ್ತ್ರಿ *

**ಲಕ್ಷಣ :** ಚಳಿಗಾಲಚಲ್ಲಿ ಕಾಲು ಒಡೆಯುವುದು ಸಾಮಾನ್ಯ. ಕೆಲವರಲ್ಲಿ ಬೇಸಿಗೆಯಲ್ಲಿಯೂ ಒಡೆಯುತ್ತದೆ. ಕೆಲವರಿಗೆ ಒಡೆದ ಜಾಗದಲ್ಲಿ ಅತಿಯಾದ ರಕ್ತ ಬರುವುದು, ಕೀವುಗುಳ್ಳೆಗಳಾಗುವುದು ಇತ್ಯಾದಿಗಳೂ ಉಂಟು.

**ಕಾರಣ :** ಸಾಮಾನ್ಯವಾಗಿ 'ಉಷ್ಣಕ್ಕೆ ಒಡೆದಿದೆ' ಎಂದೇ ಹೇಳುವರು. ಹಿಂದೆಯೇ ಹೇಳಿದಂತೆ 'ಉಷ್ಣ'ವೆಂದರೆ ಶರೀರದ ಒಳಗೆ ಉಂಟಾದ ಶುಷ್ಕತೆ ಮತ್ತು ರಕ್ತದ ಅತಿ ಆಮ್ಲೀಯತೆ ಅಥವಾ ಕ್ಷಾರೀಯತೆಯು ಕಡಿಮೆಯಾಗಿರುವ ಸ್ಥಿತಿ. ಈ ಸ್ಥಿತಿ ಏಕೆ ಏರ್ಪಡುತ್ತದೆ? ನಾಗರೀಕ ಆಹಾರಗಳಿಂದ ಮಲ ಬದ್ಧತೆ ಉಂಟಾಗುತ್ತದೆ. ಅದರಿಂದ ಈ ಸ್ಥಿತಿ ಏರ್ಪಡುತ್ತದೆ. ರೋಗವನ್ನು ತಡೆಯುವ ಪ್ರಯತ್ನ ಮಾಡಬಾರದು. ಶರೀರದ ಸ್ಥಿತಿಯನ್ನೇ ಉತ್ತಮಪಡಿಸಲು ಪ್ರಯತ್ನಿಸಬೇಕು.

**ನಿಸರ್ಗೋಪಚಾರ :** ಬಿಸಿನೀರಿನಲ್ಲಿ ಕೆಲವು ನಿಮಿಷಗಳ ಕಾಲ ಕಾಲನ್ನು ಇಟ್ಟುಕೊಂಡಿದ್ದು, ನಂತರ ತಣ್ಣೀರಿನ ಪಾದಸ್ನಾನ ಮಾಡ ಬೇಕು. ಆಮೇಲೆ ವ್ಯಾಸಲೀನ್ ಅಥವಾ ಕೊಬ್ಬರಿ ಎಣ್ಣೆಯನ್ನು ಹಚ್ಚಬೇಕು. ಆಗ ಬೂಟ್ಸ್ ಉಪಯೋಗಿ ಸುವುದು ಉತ್ತಮ. ಮುಖ್ಯವಾಗಿ ತರಕಾರಿ, ಹಣ್ಣುಗಳ ಪ್ರಮಾಣವನ್ನು ಹೆಚ್ಚಿಸಿರಿ. ಎನಿಮಾ ತೆಗೆದುಕೊಳ್ಳಿ. ತಣ್ಣೀರಿನ ಕಟಿಸ್ನಾನ, ಹೊಟ್ಟೆಗೆ ಮಣ್ಣುಪಟ್ಟಿ ಹಾಕಿ.

**ಬೆರಳುಸಂಧಿ ಸೆಲೆಯುವುದು ಲಕ್ಷಣ :** ನೀರಿನಲ್ಲಿ ಹೆಚ್ಚಿಗೆ ಕೆಲಸ ಮಾಡಿದಾಗ, ಕೆಸರಿನಲ್ಲಿ ಓಡಾಡಿದಾಗ ಕಾಲಿನ ಬೆರಳುಗಳ ಮಧ್ಯೆ ಬೆಳ್ಳಗೆ ಒಂದು ರೀತಿಯ ಹುಣ್ಣಾಗುವುದು. ಇದನ್ನು ಸೆಲೆಯುವುದು ಎನ್ನುವರು.

**ಕಾರಣ :** ಫಂಗಸ್‌ನಿಂದ ಉಂಟಾಗುವ ಕಾಯಿಲೆ ಎನ್ನುವರು. ಎಲ್ಲರಿಗೂ ಹಾಗಾಗುವುದಿಲ್ಲ. ಕೆಲವರಿಗೇ ಹಾಗಾಗಲು ಅವರ ಶರೀರದ ಒಳಗಿನ ಸ್ಥಿತಿಯೇ ಕಾರಣವೆನ್ನಬಹುದು. ಹಿಮ್ಮಡಿ ಒಡೆಯುವುದಕ್ಕೆ ಕೊಟ್ಟ ಕಾರಣವನ್ನೇ ಇದಕ್ಕೂ ಕೊಡಬಹುದು.

**ನಿಸರ್ಗೋಪಚಾರ :** ಬಿಸಿನೀರಿನಲ್ಲಿ ಪಾದಗಳನ್ನು ತೊಳೆದು ಅದಕ್ಕೆ ಒಳ್ಳೆಯ ಅರಿಶಿನದ ಪುಡಿಯನ್ನು ಹಾಕಬೇಕು. ಆಹಾರದ ಬದಲಾವಣೆ, ಎನಿಮಾ ಇತ್ಯಾದಿಗಳು ಅವಶ್ಯ. ಕಾಲಿಗೆ ಚಪ್ಪಲಿ ಅಥವಾ ಬೂಟ್ ಇಲ್ಲದೆ ಕೆಸರಿನಲ್ಲಿ ಓಡಾಡಬಾರದು.

**ಗಾಯಗಳು :**

**ನಿಸರ್ಗೋಪಚಾರ : ಬಿದ್ದಗಾಯಗಳು :** ಮಕ್ಕಳು ಮುದುಕರು ಬೀಳುವುದು ಸಾಮಾನ್ಯ. ಬಿದ್ದಕೂಡಲೇ ಸಣ್ಣಗಾಯಗಳಿಂದ ಹಿಡಿದು ದೊಡ್ಡಗಾಯಗಳವರೆವಿಗೂ ಆಗಬಹುದು. ಸಾಮಾನ್ಯವಾಗಿ ಮಂಡಿ, ಕಣ್ಣಿನ ಹುಬ್ಬು ಇತ್ಯಾದಿಗಳಿಗೆ ಏಟು ಬೀಳುತ್ತದೆ. ರಕ್ತ ಸುರಿಯಲು ಪ್ರಾರಂಭ. ರಕ್ತವನ್ನು ನೋಡಿದ ಕೂಡಲೇ ಗಾಬರಿ. ಅಪಘಾತದ ಭಾರೀ ಗಾಯಗಳನ್ನು ಬಿಟ್ಟು ಮಿಕ್ಕೆಲ್ಲ ಗಾಯಗಳನ್ನು ಮನೆಯಲ್ಲಿಯೇ ಉಪಚರಿಸಬಹುದು.

ಗಾಯವಾದ ಜಾಗವನ್ನು ಮೊದಲು ಶುದ್ಧವಾದ ತಣ್ಣೀರಿನಿಂದ ತೊಳೆಯಬೇಕು. ಗಾಯವು ಸಣ್ಣದಿದ್ದರೆ ಮತ್ತೆ ಯಾವ ಉಪಚಾರವೂ ಬೇಡ. ಇಲ್ಲವಾದಲ್ಲಿ ಸುಣ್ಣ ವನ್ನು ಹಚ್ಚಬೇಕು. ಭಯ! ಉರಿಯುತ್ತದೆಂದು; ಟಿಂಚರ್ ಹಾಕಿದಾಗ ಉರಿಯುವಷ್ಟೂ ಉರಿಯುವುದಿಲ್ಲ. ಮತ್ತೊಂದು ವಿಷಯ, ನಿಸರ್ಗ ಜೀವನವನ್ನು ಅನುಸರಿಸು ತ್ತಿರುವವರ ಶರೀರದಲ್ಲಿ ಮಲಸಂಗ್ರಹಣೆಯೂ ಕಡಿಮೆ, ಹಾಗಾಗಿ ಉರಿಯೂ ಕಡಿಮೆ. ನಿಸರ್ಗ ಜೀವನವನ್ನು ಅನುಸರಿಸದಿರುವವರಿಗೆ ಉರಿ ಸ್ವಲ್ಪ ಹೆಚ್ಚಿರಬಹುದು. ಸಹಿಸಬೇಕಾಗುತ್ತದೆ. ಸುಣ್ಣವು ಗಾಯ ವಾಸಿಯಾಗುವವರೆವಿಗೂ ಕಚ್ಚಿಕೊಂಡೇ ಇರುತ್ತದೆ. ಅದರ ಮೇಲೆ ನೀರು ಬಿದ್ದರೂ ಏನೂ ಆಗುವುದಿಲ್ಲ. ನಿಮ್ಮ ಅರಿವಿಗೆ ಬರದೇ ಗಾಯ ವಾಸಿಯಾಗಿರುತ್ತದೆ. ಲಾಂಟನಾ ಸೊಪ್ಪಿನ ರಸವು ಸಿಕ್ಕಿದರೆ ಅದನ್ನೂ ಸುಣ್ಣದ ಜೊತೆ ಬೆರೆಸಿ ಹಾಕ ಬಹುದು. ಪಟ್ಟಣಗಳಲ್ಲಿ ಸೊಪ್ಪು ಸಿಕ್ಕದಿರುವುದರಿಂದ ಸುಣ್ಣವೇ ಸಾಕು. ನಿಜವಾದ ವಿಷಯ, ಸುಣ್ಣದ ಅವಶ್ಯಕತೆಯೂ ಇಲ್ಲ. ಗಾಯಗಳು ತಾವಾಗಿಯೇ ಮಾಯುವುದು ನಿಸರ್ಗ ನಿಯಮ. ಬಿದ್ದ ಕೂಡಲೇ ಮನುಜನ ಅಂತಃಪ್ರಕೃತಿ ಕೆಲಸ ಮಾಡಿ ಬಿಡುತ್ತದೆ. ಮೊದಲ ಕೆಲಸ ರಕ್ತಹೆಪ್ಪುಗಟ್ಟುವಿಕೆ. ನಂತರ ಆ ಸ್ಥಳದಲ್ಲಿ ಆದ ವ್ಯತ್ಯಾಸವನ್ನು ನಿಧಾನವಾಗಿ ಸರಿ ಪಡಿಸಿಕೊಂಡು ಮೊದಲಿನಂತೆ ಮಾಡುತ್ತದೆ. ನಮ್ಮ ಮತ್ತೊಂದು ಭಯ, ಹೊರಗಿನಿಂದ ಎಲ್ಲಿ ಕ್ರಿಮಿಗಳು ಸೇರಿ ಬಿಡುತ್ತವೆಯೋ ಎಂದು. ಅಲ್ಲದೆ ನೋವು. ನಮ್ಮ ಭಯವು ನೋವನ್ನು ಹೆಚ್ಚಿಸುತ್ತದಲ್ಲದೆ ಕಡಿಮೆ ಮಾಡ ಲಾರದು. ಕ್ರಿಮಿಗಳ ಬಗ್ಗೆ ಭಯ ಏತಕ್ಕಾಗಿ? ಶರೀರದ ಒಳಗೆ ಕೊಳೆಯ ಸಂಗ್ರಹವಿದ್ದಲ್ಲಿ ಮಾತ್ರ ಕ್ರಿಮಿಗಳು ಬಂದು ತೊಂದರೆ ಕೊಡಬಲ್ಲವು. ಗಾಯವು ದೊಡ್ಡದಾಗಿದ್ದಲ್ಲಿ, ಉಪವಾಸ, ಎನಿಮಾ, ಸೂರ್ಯಸ್ನಾನ, ತಣ್ಣೀರಿನ ಪಟ್ಟಿ, ನಂತರ ಹಣ್ಣು–ತರಕಾರಿಗಳ ಊಟ ಇತ್ಯಾದಿಗಳಿಗೆ ಬರಬೇಕಾಗುತ್ತದೆ.

* 'ನಿಸರ್ಗ ಯೋಗಧಾಮ' ನಂ. ೨/೨೦೫೯, ೧೧ನೇ ಕ್ರಾಸ್, ಎಸ್.ಎಸ್.ಪುರಂ, ತುಮಕೂರು –೫೭೨ ೧೦೨.

ಶ್ರೀ ಸಿದ್ಧಗಂಗಾ ಮಠ, ತುಮಕೂರು

## ಶ್ರೀ ಸಿದ್ಧಗಂಗಾಮಠದ ನೀರು ಸರಬರಾಜು ಮತ್ತು ಒಳಚರಂಡಿ ವ್ಯವಸ್ಥೆಯ ಸಮಗ್ರ ಯೋಜನೆಗೆ ಶ್ರೀ ಸಿದ್ಧಗಂಗಾ ಗುರುಕುಲ ಡೆವಲಪ್‌ಮೆಂಟ್ ಟ್ರಸ್ಟ್‌ಗೆ ದೇಣಿಗೆ ನೀಡಿದ ದಾನಿಗಳ ಪಟ್ಟಿ

| ಕ್ರ.ಸಂ. | ಹೆಸರು ಮತ್ತು ಊರು | ಮೊತ್ತ |
|---|---|---|
| ೯೦೧. | ಶ್ರೀಮತಿ ಮಲ್ಲಮ್ಮ ಎಂ. ಗುರುಸ್ವಾಮಿ<br>ಗುಂಡ್ಲುಪೇಟೆ | ೧,೦೦೧.೦೦ |
| ೯೦೨. | ಶ್ರೀ ಎನ್.ಆರ್. ಮಲ್ಲಿಕಾರ್ಜುನಯ್ಯ<br>ಬೆಂಗಳೂರು | ೩೬,೫೦೦.೦೦ |
| ೯೦೩. | ಶ್ರೀ ಹೆಚ್.ಬಿ. ನಾಗಭೂಷಣ<br>ಬೆಂಗಳೂರು | ೧೦,೮೦೦.೦೦ |
| ೯೦೪. | ಶ್ರೀ ಸಿದ್ಧಗಂಗಪ್ಪ<br>ಹೊಸಪಾಳ್ಯ | ೧,೦೦೦.೦೦ |
| ೯೦೫. | ಪ್ರೊ. ಹೆಚ್.ವಿ. ವೀರಭದ್ರಯ್ಯ<br>ತುಮಕೂರು | ೧,೦೦೧.೦೦ |
| ೯೦೬. | ಶ್ರೀ ಡಿ.ಎಸ್. ಜಯಣ್ಣ<br>ದೊಡ್ಡೇರಿ | ೧,೦೦೧.೦೦ |
| ೯೦೭. | ಪ್ರೊ. ಬಿ. ಗಂಗಾಧರಯ್ಯ<br>ತುಮಕೂರು | ೩೬,೫೦೦.೦೦ |
| ೯೦೮. | ಶ್ರೀ ಜಿ. ಗುರುಬಸಪ್ಪ<br>ಬೆಂಗಳೂರು | ೫೦,೦೦೧.೦೦ |
| ೯೦೯. | ತುಮಕೂರು ಕೈಗಾರಿಕಾ ಸಹಕಾರ ಸಂಘ (ನಿ.)<br>ತುಮಕೂರು | ೧೦,೦೦೦.೦೦ |
| ೯೧೦. | ಶ್ರೀ ಎ.ಜಿ. ನಾಗರಾಜಯ್ಯ<br>ತುಮಕೂರು | ೧,೦೦೦.೦೦ |
| ೯೧೧. | ಶ್ರೀ ಸಿ. ಹಾಲಸಿದ್ದೇಗೌಡ<br>ಹಾಸನ | ೧,೦೦೦.೦೦ |
| ೯೧೨. | ಶ್ರೀ ಜಿ. ಶಿವಲಿಂಗಸ್ವಾಮಿ<br>ಮೈಸೂರು | ೨,೦೦೦.೦೦ |
| ೯೧೩. | ಶ್ರೀ ಹೆಚ್.ಜಿ. ಗುರುಪ್ರಸಾದ್<br>ಮೈಸೂರು | ೨,೦೦೦.೦೦ |
| ೯೧೪. | ಶ್ರೀ ಟಿ.ಎಂ. ಗಂಗಾಧರಯ್ಯ<br>ಬೆಂಗಳೂರು | ೧,೦೦೧.೦೦ |
| ೯೧೫. | ಶ್ರೀ ಕೆ.ಹೆಚ್. ಗಂಗಯ್ಯ<br>ಕುಣಿಗಲ್ | ೧,೧೦೫.೦೦ |
| ೯೧೬. | ಶ್ರೀ ಹೆಚ್.ಬಿ. ನಂಜುಂಡಯ್ಯ<br>ತುಮಕೂರು | ೪,೦೦೦.೦೦ |
| ೯೧೭. | ಶ್ರೀ ಎನ್. ಸುರೇಶ್<br>ಬೆಂಗಳೂರು | ೩೬,೫೦೦.೦೦ |
| ೯೧೮. | ಶ್ರೀ ಎಸ್.ಎಂ. ಮಲ್ಲೇಶಪ್ಪ<br>ಹಾಸನ | ೨,೦೦೦.೦೦ |
| ೯೧೯. | ಶ್ರೀ ಎಸ್. ದೇವರಾಜ್<br>ಮಣ್ಣನಪುರ | ೨,೦೦೦.೦೦ |
| ೯೨೦. | ಶ್ರೀ ಕೆ.ಪಿ. ಸುವರ್ಣ<br>ರಾಮೇಶ್ವರ | ೫,೦೦೦.೦೦ |
| ೯೨೧. | ಶ್ರೀ ಕೆ.ಪಿ. ಉಷಾರಾಣಿ<br>ಕೂಗಿಕೊಡೆ | ೧,೦೦೦.೦೦ |
| ೯೨೨. | ಶ್ರೀ ಬಿ. ಶಿವಣ್ಣ<br>ತಿಪಟೂರು | ೧,೦೦೦.೦೦ |
| ೯೨೩. | ಶ್ರೀ ವೈ.ವಿ. ರುದ್ರಪ್ಪ<br>ಬೆಂಗಳೂರು | ೧೦,೦೦೧.೦೦ |
| ೯೨೪. | ಶ್ರೀ ಟಿ. ಯಂಕಯ್ಯ ಶೆಟ್ಟಿ<br>ಬ್ಯಾಗವಾಟ | ೧೪,೬೦೦.೦೦ |
| ೯೨೫. | ಶ್ರೀ ಲಕ್ಷ್ಮೀಪತಿ ಪಾಟೀಲ್<br>ಬ್ಯಾಗವಾಟ | ೧೧,೦೧೬.೦೦ |
| ೯೨೬. | ಶ್ರೀ ಜಿ. ಈರಣ್ಣ ಶೆಟ್ಟಿ<br>ಬ್ಯಾಗವಾಟ | ೧೧,೧೧೧.೦೦ |
| ೯೨೭. | ಶ್ರೀ ಅಮರೇಶ ಸಾಹುಕಾರ್<br>ಚಿಕ್ಕದಿನ್ನಿ | ೨,೫೦೦.೦೦ |
| ೯೨೮. | ಶ್ರೀ ಸಿದ್ಧರೆಡ್ಡಿ<br>ಚಿಕ್ಕದಿನ್ನಿ | ೧೦,೧೦೦.೦೦ |
| ೯೨೯. | ಶ್ರೀ ಬಸವರಾಜ ಸಾಹುಕಾರ್<br>ಚಿಕ್ಕದಿನ್ನಿ | ೫,೧೦೦.೦೦ |
| ೯೩೦. | ಶ್ರೀ ಶಿವಬಸಪ್ಪಗೌಡ<br>ತೋರಣದಿನ್ನಿ | ೧,೦೦೦.೦೦ |
| ೯೩೧. | ಶ್ರೀ ಸಿ.ಹೆಚ್. ಸಾಹಿಬಾಬ<br>ಗಾಲಿದುರ್ಗಮ್ಮ ಕ್ಯಾಂಪ್ | ೧,೦೦೦.೦೦ |
| ೯೩೨. | ಶ್ರೀ ಶೇಖರಪ್ಪ ಗೌಡಹಿಟಗಿ<br>ತೋರಣದಿನ್ನಿ | ೧,೦೦೦.೦೦ |
| ೯೩೩. | ಶ್ರೀ ಸಿ.ಹೆಚ್. ವೀರರಾಜು<br>ತೋರಣದಿನ್ನಿ | ೧,೦೦೦.೦೦ |
| ೯೩೪. | ಶ್ರೀ ವೈ. ಸೂರ್ಯನಾರಾಯಣ<br>ತೋರಣದಿನ್ನಿ | ೧,೦೦೦.೦೦ |

*(ಮುಂದುವರೆಯುತ್ತದೆ)*



ತುಮಕೂರಿನಲ್ಲಿ ನೂತನವಾಗಿ ಪ್ರಾರಂಭವಾದ ಸಾಯಿ ಹಿರೋ ಶೋರೂಂ ಅನ್ನು ಪರಮಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮೀಜಿ ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಸಾಯಿ ಹಿರೋ ಶೋರೂಂನ ಪದಾಧಿಕಾರಿಗಳು ಉಪಸ್ಥಿತರಿದ್ದರು.



ಜನಸಂಖ್ಯಾ ರಿಜಿಸ್ಟರ್‌ಗೆ ಆಧಾರ್ ಜೋಡಣೆ ಮಾಹಿತಿ ಸಂಗ್ರಹಣಾ ಕಾರ್ಯಕ್ಕೆ ಪರಮಪೂಜ್ಯ ಶ್ರೀ ಶ್ರೀಗಳವರು ಚಾಲನೆ ನೀಡಿದರು. ಈ ಸಂದರ್ಭದಲ್ಲಿ ತುಮಕೂರು ಜಿಲ್ಲಾ ತಹಶೀಲ್ದಾರ್ ಟಿ.ಆರ್. ಕಾಂತರಾಜುರವರು ಉಪಸ್ಥಿತರಿದ್ದರು.



ತುಮಕೂರು ನಗರದ ಹಜರ್ರತ್ ಟಿಪ್ಪು ಸುಲ್ತಾನ್ ಶಹೀದ್ ಮೆಮೋರಿಯಲ್ ಎಜುಕೇಷನ್ ವೆಲ್‌ಫೇರ್ ಟ್ರಸ್ಟ್‌ನ ಅಧ್ಯಕ್ಷರು ಹಾಗೂ ಪದಾಧಿಕಾರಿಗಳು ಪೂಜ್ಯ ಶ್ರೀ ಶ್ರೀಗಳವರನ್ನು ಭೇಟಿಯಾಗಿ ಟಿಪ್ಪು ಭಾವಚಿತ್ರವನ್ನು ಕೊಡುಗೆ ನೀಡಿ ಆಶೀರ್ವಾದ ಪಡೆದರು.



ಮೈದಾಳ ಹಾಗೂ ದೇವರಾಯನಪಟ್ಟಣ ಕೆರೆಗಳಿಗೆ ಹೇಮಾವತಿ ನೀರು ಹರಿಸಲು ಒತ್ತಾಯಿಸಿ ಜಯ ಕರ್ನಾಟಕ ಯುವ ಘಟಕ ವತಿಯಿಂದ ಬೈಕ್ ರ್‍ಯಾಲಿಗೆ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗಸ್ವಾಮಿಗಳು ಚಾಲನೆ ನೀಡಿದರು. ಈ ಸಂದರ್ಭದಲ್ಲಿ ಪ್ರಜಾಪ್ರಗತಿ ಸಂಪಾದಕರಾದ ಎಸ್. ನಾಗಣ್ಣ ಹಾಗೂ ಇನ್ನಿತರರು ಉಪಸ್ಥಿತರಿದ್ದರು.

